# ಮಾಂಡೂಕೋಪನಿಷತ್

## ಭಾಷ್ಯ ಹಾಗೂ ಖಂಡಾರ್ಥ

(ಕನ್ನಡ ಅನುವಾದ ಸಹಿತ)



ಅನುವಾದಕರು

ವಿದ್ವಾನ್ ಕೃಷ್ಣಾಚಾರ್ಯ ಉಪಾಧ್ಯಾಯ, ಎಂ.ಎ.

ಜಯತೀರ್ಥ ವಿದ್ಯಾಪೀಠ

॥ ಶ್ರೀ ಗುರುಭ್ಯೋನಮಃ ॥

# ಮಾಂಡೂಕೋಪನಿಷತ್

ಭಾಷ್ಯ ಮತ್ತು ಖಂಡಾರ್ಥ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

**ಉಪನಿಷದ್ಭಾಷ್ಯ**

ಮತ್ತು

ಶ್ರೀರಾಘವೇಂದ್ರತೀರ್ಥ ವಿರಚಿತ

**ಖಂಡಾರ್ಥ**

(ಕನ್ನಡ ಅನುವಾದ ಸಹಿತ)

ಅನುವಾದಕರು

**ವಿದ್ವಾನ್ ಕೃಷ್ಣಾಚಾರ್ಯ ಉಪಾಧ್ಯಾಯ,** ಎಂ.ಎ.

ಜಯತೀರ್ಥ ವಿದ್ಯಾಪೀಠ, ಉತ್ತರಾದಿ ಮಠ, ಬಸವನಗುಡಿ, ಬೆಂಗಳೂರು.

ಪ್ರಕಾಶಕರು

**ಶ್ರೀಗುರುರಾಜ ಅಸೋಸಿಯೇಷನ್ (ರಿ.)**

ಮಾಡಲ್‌ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು-560 004.

ಗ್ರಂಥದ ಹೆಸರು : **ಮಾಂಡೂಕೋಪನಿಷತ್**

ಭಾಷ್ಯಕಾರರು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು

ವ್ಯಾಖ್ಯಾನಕಾರರು : ಶ್ರೀರಾಘವೇಂದ್ರತೀರ್ಥರು

ಅನುವಾದಕರು : ವಿದ್ವಾನ್ ಕೃಷ್ಣಾಚಾರ್ಯ ಉಪಾಧ್ಯಾಯ, ಎಂ.ಎ.

ಪ್ರಕಾಶಕರು ಶ್ರೀಗುರುರಾಜ ಅಸೋಸಿಯೇಷನ್ (ರಿ.)
ಮಾಡಲ್‌ಹೌಸ್ ಬೀದಿ, ಬಸವನಗುಡಿ
ಬೆಂಗಳೂರು-560 004.

ಪುಟಗಳು : xvi + 74

ಪ್ರತಿಗಳು : 1000

ಬೆಲೆ ರೂ.5/-


ಮುದ್ರಕರು : ವಾಗರ್ಥ,
ನಂ.149, 8ನೇ ಅಡ್ಡರಸ್ತೆ, ನ.ರಾ. ಕಾಲೋನಿ, ಬೆಂಗಳೂರು-19. ☎: 652 7677

ಶ್ರೀದಿಗ್ವಿಜಯರಾಮೋ ವಿಜಯತೇ

# ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠ

ಮೊಕ್ಕಾಂ - ಮೈಸೂರು ದಿನಾಂಕ : ೧೭-೮-೨೦೦೨



## ಅನುಗ್ರಹ ಸಂದೇಶ

ಪೂರ್ಣಾನಂದಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಮ್ ।
ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಮ್ ॥

ಮಂಡೂಕರೂಪಿಯಾದ ವರುಣನು ಮಾಡಿರುವ ನಾರಾಯಣ ಸ್ತುತಿಯೇ ಈ ಮಾಂಡೂಕೋಪನಿಷತ್ತು. ಈ ಉಪನಿಷತ್ತಿನಲ್ಲಿ ವಿಶ್ವ, ತೈಜಸ, ಪ್ರಾಜ್ಞ, ತುರೀಯವೆನ್ನುವ ನಾಲ್ಕು ಭಗವದ್ರೂಪಗಳು ವರ್ಣಿತವಾಗಿವೆ. ಪ್ರಣವವು ಸ್ತುತಿಸಾಧನವಾಗಿದೆ. ಈ ಓಂಕಾರವು ''ಪ್ರಣವಃ ಸರ್ವವೇದೇಷು'' ಎಂದು ಭಗವದ್ಗೀತೆಯಲ್ಲಿ ಭಗವಂತನ ವಿಭೂತಿಗೆ ಸ್ಥಾನವೆಂದು ಕೊಂಡಾಡಲ್ಪಟ್ಟಿದೆ. ಎಲ್ಲ ಮಾತಿಗೂ ಮೂಲ ವೇದ. ಈ ವೇದಕ್ಕೆ ಪುರುಷಸೂಕ್ತ, ಪುರುಷ ಸೂಕ್ತಕ್ಕೆ ಇಪ್ಪತ್ತನಾಲ್ಕು ಅಕ್ಷರಾತ್ಮಕವಾದ ಗಾಯತ್ರಿಯು ಗಾಯತ್ರಿಗೆ ವ್ಯಾಹೃತಿಯು ಮೂಲವಾಗಿವೆ. ಈ ವ್ಯಾಹೃತಿಗೆ ಪ್ರಣವವು ಮೂಲವಾಗಿದೆ. ಓಂಕಾರವು ತ್ರಿಮಾತ್ರವು. ಅಷ್ಟಮಾತ್ರವೂ ಹೌದು. ವಿಶ್ವ, ತೈಜಸ, ಪ್ರಾಜ್ಞ, ತುರೀಯರನ್ನು ಹಾಗೂ ಆತ್ಮ, ಅಂತರಾತ್ಮ, ಪರಮಾತ್ಮ ಜ್ಞಾನಾತ್ಮರನ್ನು ಸ್ತುತಿಸುತ್ತದೆ. ಅದರಂತೆ ಕೃಷ್ಣ, ರಾಮ, ನೃಸಿಂಹ, ವರಾಹ, ಕೂರ್ಮ, ಪರಂಜ್ಯೋತಿ, ಪರಂಬ್ರಹ್ಮ, ವಾಸುದೇವ

ರೂಪಗಳ ವಾಚಕವೂ ಆಗಿದೆ. ಪ್ರಣವದ ಮಹಾತ್ಮ್ಯೆ ಇಷ್ಟೆಯೇ? ಅಲ್ಲ! ''ಆತ್ಮೋಜ್ಯಾಯಾಂಶ್ಚ'' ಪ್ರಣವವಾಗಿದೆ. ಈ ಎಲ್ಲ ಜೀವರ ಯಥಾಯೋಗ್ಯವಾಗಿ ಜಾಗೃತ್, ಸ್ವಪ್ನ, ಸುಷುಪ್ತಿ, ಎನ್ನುವ ಮೂರು ಅವಸ್ಥೆಗಳ ನಿಯಂತಾರರಾದ ವಿಶ್ವ ತೈಜಸ ಪ್ರಾಜ್ಞರ ಹಾಗೂ ಮೋಕ್ಷ ನಿಯಾಮಕನಾದ ತುರೀಯನ ಮಹಿಮೆಯನ್ನು ಓಂಕಾರದ ಮೂಲಕವಾಗಿ ಈ ಉಪನಿಷತ್ತು ವರ್ಣಿಸಿದೆ. ಶ್ರೀಮದಾಚಾರ್ಯರ ಭಾಷ್ಯವಿಲ್ಲದೆ ಈ ಉಪನಿಷತ್ತಿನ ಅರ್ಥವನ್ನು ತಿಳಿಯಲು ನಮ್ಮಿಂದಾಗುವುದಿಲ್ಲ. ಭಾಷ್ಯವೂ ಸಹ ಟೀಕಾ, ಟಿಪ್ಪಣಿ ಖಂಡಾರ್ಥಗಳಿಲ್ಲದೇ ಸುಲಭವಾಗಿ ಬೋಧವಾಗುವುದಿಲ್ಲ. ನಮ್ಮ ಪ್ರಿಯಶಿಷ್ಯರೂ, ಉತ್ತಮ ವಿದ್ವಾಂಸರೂ ಅನೇಕ ಗ್ರಂಥ ಸಂಪಾದಕರೂ ಆದ ಉಪಾಧ್ಯಾಯ ಕೃಷ್ಣಾಚಾರ್ಯರು ಭಾಷ್ಯ ಹಾಗೂ ಖಂಡಾರ್ಥಗಳೊಟ್ಟಿಗೆ ಮಾಂಡೂಕೋಪನಿಷತ್ತನ್ನು ಸುಂದರವಾಗಿ ಅನುವಾದಿಸಿದ್ದಾರೆ. ಜಿಜ್ಞಾಸುಗಳಿಗೆ ಇದು ಅತ್ಯಂತ ಉಪಯುಕ್ತವಾಗಿದೆ. ಇಂತಹ ಜ್ಞಾನಕಾರ್ಯವು ಕೃಷ್ಣಾಚಾರ್ಯ ಉಪಾಧ್ಯಾಯರಿಂದ ನಿರಂತರ ನಡೆಯುವಂತೆ ಅಸ್ಮದುಪಾಸ್ಯನಾದ ಶ್ರೀಮೂಲದಿಗ್ವಿಜಯರಾಮಾಭಿನ್ನನಾದ ಅಂಭೃಣೀಪತಿ ವೇದವ್ಯಾಸರು ಅನುಗ್ರಹಿಸಲೆಂದು ಆಶಿಸುತ್ತೇವೆ. ಗುರುರಾಜ ಅಸೋಸಿಯೇಷನ್ ಸಂಸ್ಥೆಯು ಜನಸಾಮಾನ್ಯರಿಗೆ ಉಪಯುಕ್ತವಾಗುವಂತೆ ಆಚಾರ್ಯರ ಸಿದ್ಧಾಂತಕ್ಕೆ ಸಂಬಂಧಿಸಿದ ಅನೇಕ ಕೃತಿಗಳನ್ನು ಪ್ರಕಟಿಸಿ ಜನತೆಯ ಅಭಿನಂದನೆಗೆ ಪಾತ್ರವಾಗಿದೆ. ಗುರುರಾಜರ ಆರಾಧನೆಯ ಸಂದರ್ಭದಲ್ಲಿ ಮಾಂಡೂಕೋಪನಿಷತ್ತನ್ನು ಪ್ರಕಟಿಸುತ್ತಿರುವುದು ನಮಗೆ ಅತ್ಯಂತ ಆನಂದವಾಗಿದೆ. ಈ ಸಂಸ್ಥೆಯ ಎಲ್ಲ ಸದಸ್ಯರಿಗೂ ಹಾಗೂ ಮುದ್ರಣಕ್ಕೆ ಆರ್ಥಿಕ ಸಹಾಯವಿತ್ತವರಿಗೂ ಅಸ್ಮದುಪಾಸ್ಯನಾದ ಮೂಲರಾಮಚಂದ್ರದೇವರು ಶ್ರೀಮದಾಚಾರ್ಯರು ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಮೈಸೂರು
ಶ್ರಾವಣ ಶುದ್ಧದಶಮೀ

**ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು**
ಉತ್ತರಾದಿಮಠ

# ಮುನ್ನುಡಿ

ಮಾಂಡೂಕ ಅಂದರೆ ಕಪ್ಪೆ. ವರುಣನು ಕಪ್ಪೆಯ ರೂಪದಿಂದ ಈ ಉಪನಿಷತ್ತಿನಲ್ಲಿಯ ಮಂತ್ರಗಳಿಂದ ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂಬ ಪರಮಾತ್ಮನ ನಾಲ್ಕು ರೂಪಗಳ ಸ್ತೋತ್ರವನ್ನು ಮಾಡಿದ್ದರಿಂದ ಈ ಉಪನಿಷತ್ತಿಗೆ ಮಾಂಡೂಕೋಪನಿಷತ್ ಎಂಬ ಹೆಸರು ಬಂದಿದೆ. ವರುಣನು ಈ ಮಂತ್ರಗಳ ದೃಷ್ಟಾರನಾದ ಋಷಿ. ಚತುರೂಪನಾದ ಪರಮಾತ್ಮನೇ ದೇವತೆಯು. ಸಮಸ್ತ ಓಂಕಾರದಿಂದ ಪ್ರತಿಪಾದಿತನಾದ ಪರಮಾತ್ಮನ ಗುಣಪೂರ್ಣರೂಪವನ್ನು ನಿರೂಪಿಸುವುದೂ ಓಂಕಾರದ ಅವಯವಗಳಾದ ಅ, ಉ, ಮ ಮತ್ತು ನಾದ ಗಳಿಂದ ಪ್ರತಿಪಾದಿತವಾಗುವಂತೆ ವಿಶ್ವ, ತೈಜಸ, ಪ್ರಾಜ್ಞ, ತುರೀಯ ರೂಪಗಳನ್ನು ನಿರೂಪಿಸುವುದೂ ಈ ಉಪನಿಷತ್ತಿನ ಮುಖ್ಯ ವಿಷಯ.

ಅಕ್ಷರನಾಮಕ ಪರಮಾತ್ಮನು ಓಂಕಾರದಿಂದ ಪ್ರತಿಪಾದಿತನಾಗಿದ್ದಾನೆ. ಆತನು ಗುಣಪೂರ್ಣನೂ ತ್ರಿಕಾಲಾತೀತನೂ ಸರ್ವಜೀವ ನಿಯಾಮಕನೂ ಆಗಿದ್ದಾನೆ ಎಂದು ಸಮಸ್ತ ಓಂಕಾರವು ಪ್ರತಿಪಾದಿಸುತ್ತದೆ ಎಂದು ಆರಂಭದಲ್ಲಿಯೇ ಹೇಳಿ. ಪರಮಾತ್ಮನ ನಾಲ್ಕು ರೂಪಗಳನ್ನು ಮುಂದೆ ವಿವರಿಸಲಾಗಿದೆ. ಓಂಕಾರದಲ್ಲಿಯ 'ಅ'ಕಾರದಿಂದ ಪ್ರತಿಪಾದ್ಯನಾದ ವಿಶ್ವನು ಬಲಗಣ್ಣಿನಲ್ಲಿದ್ದು ಜೀವನ ಜಾಗ್ರದವಸ್ಥೆಗೆ ನಿಯಾಮಕನಾಗಿರುವನು. 'ಉ'ಕಾರದಿಂದ ಪ್ರತಿಪಾದಿತನಾದ ತೈಜಸರೂಪ ಪರಮಾತ್ಮನು ಕಂಠದೇಶದಲ್ಲಿದ್ದು ಜೀವನ ಸ್ವಪ್ನಾವಸ್ಥೆಗೆ ನಿಯಾಮಕನಾಗಿದ್ದಾನೆ. ಮಕಾರದಿಂದ ಪ್ರತಿಪಾದಿತನಾದ ಪ್ರಾಜ್ಞನು ಸುಷುಪ್ತಿ ಆದರೆ ಗಾಢನಿದ್ರಾವಸ್ಥೆಗೆ ನಿಯಾಮಕನಾಗಿದ್ದಾನೆ. ಓಂಕಾರದ ನಾದದಿಂದ ಪ್ರತಿಪಾದಿತನಾದ ತುರೀಯ ನಾಮಕ ಪರಮಾತ್ಮನು ಮುಕ್ತಾವಸ್ಥೆಯಲ್ಲಿ ನಿಯಾಮಕನಾಗಿದ್ದಾನೆ. ಈ ನಾಲ್ಕೂ ರೂಪಗಳ ರೂಪ ಮತ್ತು ಕಾರ್ಯಗಳನ್ನು ಈ ಉಪನಿಷತ್ತಿನಲ್ಲಿ ವಿವರವಾಗಿ ವರ್ಣಿಸಲಾಗಿದೆ.

ಈ ವರ್ಣನೆಯನ್ನು ಗದ್ಯರೂಪದಲ್ಲಿ ಮೊದಲು ಕೊಟ್ಟು ನಂತರ ಬ್ರಹ್ಮದೃಷ್ಟವಾದ ಶ್ಲೋಕಗಳಿಂದ ವಿವರಿಸಲಾಗಿದೆ.

ಈ ಬ್ರಹ್ಮದೃಷ್ಟಶ್ಲೋಕಗಳು ಗೌಡಪಾದ-ಕಾರಿಕೆಯಲ್ಲ. ಆಗಮ ಪ್ರಕರಣ ಎಂದು ಹೆಸರಿಟ್ಟು ಕೊಡಲಾಗಿದೆ. ಆಗಮ ಪ್ರಕರಣ ಎಂಬ ಹೆಸರಿನಿಂದಲೇ ಇವು ಶ್ರುತಿಯಿಂದ ಆಯ್ದುಕೊಂಡವು ಎಂದು ಸ್ಪಷ್ಟವಾಗುತ್ತದೆ. ಆದರೆ ಕೆಲವು ಆಧುನಿಕ

ವಿದ್ವಾಂಸರು. ಇವು ಗೌಡಪಾದ ಕಾರಿಕೆಯ ಶ್ಲೋಕಗಳು ಎಂದು ಹೇಳುತ್ತಾರೆ. ಇದು ಸರಿಯಲ್ಲ. ಇವುಗಳಲ್ಲಿ ಕೆಲವು ಶ್ಲೋಕಗಳನ್ನು ರಾಮಾನುಜಾಚಾರ್ಯರೂ ಶ್ರುತಿ ಎಂದು ಉಲ್ಲೇಖಿಸಿದ್ದಾರೆ. ಶಂಕರಾಚಾರ್ಯರು ಇವುಗಳಲ್ಲಿಯ ಕೆಲವು ಶ್ಲೋಕಗಳನ್ನು ಶ್ರುತಿ ಎಂದು ಬೇರೆ ಸಂದರ್ಭದಲ್ಲಿ ಉಲ್ಲೇಖಿಸಿದ್ದಾರೆ. ಆನಂದಗಿರಿ ಅಪ್ಪಯ್ಯದೀಕ್ಷಿತ ಮೊದಲಾದ ಅದ್ವೈತ ವ್ಯಾಖ್ಯಾನಕಾರರೂ ಇವುಗಳಲ್ಲಿ ಕೆಲವು ಶ್ಲೋಕಗಳನ್ನು ಅಲ್ಲಲ್ಲಿ ಶ್ರುತಿ ಎಂದು ಉಲ್ಲೇಖಿಸಿದ್ದಾರೆ. ಆದ್ದರಿಂದ ಇವು ಗೌಡಪಾದ ಕಾರಿಕೆಯ ಶ್ಲೋಕಗಳು ಎಂಬ ಆಧುನಿಕ ವಿದ್ವಾಂಸರ ಅಭಿಪ್ರಾಯ ಸರಿಯಲ್ಲ.

ಮೇಲೆ ಹೇಳಿದ ಪರಮಾತ್ಮನ ನಾಲ್ಕುರೂಪಗಳ ವರ್ಣನೆಯಲ್ಲದೆ ಈ ಉಪನಿಷತ್ತಿನಲ್ಲಿ ಇನ್ನೂ ಎರಡು ಮುಖ್ಯವಾದ ವಿಷಯಗಳನ್ನು ನಿರೂಪಿಸಲಾಗಿದೆ. (೧) ಸೃಷ್ಟಿ ಹೇಗೆ ಆಯಿತು (೨) ಸೃಷ್ಟಿಯ ಉದ್ದೇಶವೇನು?

ಸೃಷ್ಟಿಯು ಹೇಗೆ ಆಯಿತು ಎಂಬ ವಿಷಯದಲ್ಲಿ ಈ ಉಪನಿಷತ್ತಿನಲ್ಲಿ ನಾಲ್ಕು ಅಭಿಪ್ರಾಯಗಳನ್ನು ನಿರೂಪಿಸಿ ನಾಲ್ಕನೆಯದೇ ಸಿದ್ಧಾಂತ ಎಂದು ಹೇಳಲಾಗಿದೆ.

೧) ಬ್ರಹ್ಮನೇ ಮಹತ್ತತ್ತ್ವಾದಿರೂಪದಿಂದ ಪರಿಣಾಮ ಹೊಂದಿ ಸೃಷ್ಟಿಯಾಗುವುದು.
೨) ಈ ಪ್ರಪಂಚವು ಕನಸು ಮತ್ತು ಇಂದ್ರಜಾಲಗಳಂತೆ ಆರೋಪಿತವಾದದ್ದು ಸತ್ಯವಾದದ್ದಲ್ಲ.
೩) ಕಾಲವೇ ಸೃಷ್ಟಿಗೆ ಆಧಾರ.
೪) ಭಗವಂತನ ಇಚ್ಛೆಯಿಂದ ಸೃಷ್ಟಿಯಾಗುತ್ತದೆ.

ಇವುಗಳಲ್ಲಿ ಮೊದಲನೆ ಮೂರು ಅಭಿಪ್ರಾಯಗಳು ಸರಿಯಲ್ಲ. ಭಗವಂತನ ಇಚ್ಛೆಯಿಂದಲೇ ಸೃಷ್ಟಿ ಆಗುತ್ತದೆ ಎಂಬುದೇ ಸಿದ್ಧಾಂತ.

ಸೃಷ್ಟಿಯ ಉದ್ದೇಶವನ್ನೂ ಮೂರು ವಿಧವಾಗಿ ನಿರೂಪಿಸಿ ಮೂರನೆಯದೇ ಸಿದ್ಧಾಂತವೆಂದು ಹೇಳಲಾಗಿದೆ.

೧) ಭೋಗಕ್ಕಾಗಿ ಸೃಷ್ಟಿ
೨) ಕ್ರೀಡೆಗಾಗಿ ಸೃಷ್ಟಿ
೩.) ಸೃಷ್ಟಿ ಮಾಡುವುದು ಭಗವಂತನ ಸಹಜ ಸ್ವಭಾವ.

ಇವುಗಳಲ್ಲಿ ಮೂರನೆಯದೇ ಸರಿಯಾದ ಸಿದ್ಧಾಂತ.

ಈ ಅಪೂರ್ವವಾದ ವಿಷಯವನ್ನು ಹೇಳುವ ಈ ಉಪನಿಷತ್ತಿನಲ್ಲಿ ಬರುವ

(೧) ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ
(೨) ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನ ಚಿತ್

ಎಂಬ ಶ್ಲೋಕಗಳು ಅದ್ವೈತಕ್ಕೆ ಅನುಕೂಲವಾಗಿವೆ ಎಂಬುದು ಅದ್ವೈತ ವ್ಯಾಖ್ಯಾನಕಾರರ ಅಭಿಪ್ರಾಯ. ಆದರೆ ಇವುಗಳ ಸರಿಯಾದ ಅರ್ಥವನ್ನು ಶ್ರೀಮಧ್ವ ಭಾಷ್ಯದಲ್ಲಿ ವಿವರಿಸಲಾಗಿದೆ. ಇಲ್ಲಿ ಬರುವ ಅದ್ವೈತ ಮತ್ತು ದ್ವೈತ ಪದಗಳ ಅರ್ಥವನ್ನು ವಿವರಿಸಲಾಗಿದೆ.

ಅನೇಕ ಶ್ರೇಷ್ಠ ವೇದಾಂತ ಪ್ರಮೇಯಗಳಿರುವ ಈ ಉಪನಿಷತ್ತು, ಭಾಷ್ಯ ಮತ್ತು ಖಂಡಾರ್ಥಗಳ ಕನ್ನಡ ಅನುವಾದ ಅಗತ್ಯವಾಗಿತ್ತು. ವೇದಾಂತ ಪ್ರಮೇಯಗಳನ್ನು ತಿಳಿದುಕೊಳ್ಳಬೇಕೆಂದು ಅಪೇಕ್ಷೆಯಿರುವ ಆದರೆ ಸಂಸ್ಕೃತ ಜ್ಞಾನವಿಲ್ಲದೇ ಇರುವ ಸಾತ್ತ್ವಿಕ ಅಧಿಕಾರಿಗಳಿಗೆ ಕನ್ನಡದಲ್ಲಿ ಈ ಪ್ರಮೇಯಗಳನ್ನು ತಿಳಿಸಿ ಹೇಳುವುದು ಅಗತ್ಯವಿತ್ತು. ಈ ಕಾರ್ಯವನ್ನು ಶ್ರೀ ಕೃಷ್ಣಾಚಾರ್ಯ ಉಪಾಧ್ಯಾಯರು ಮಾಡಿದ್ದಾರೆ. ಅನುವಾದವು ಸುಲಭವೂ ಸ್ಪಷ್ಟವೂ ಶಾಸ್ತ್ರಾನುಸಾರಿಯೂ ಆಗಿದೆ.

ಇತ್ತೀಚೆಗೆ ಮಠ-ಮಂದಿರಗಳಲ್ಲಿ ಪಾಠ ಪ್ರವಚನ ಮಾಡುವ ಯುವ ವಿದ್ವಾಂಸರ ಸಂಖ್ಯೆ ಹೆಚ್ಚಾಗಿದೆ. ಇವರೆಲ್ಲ ಸಂಸ್ಕೃತ ಗ್ರಂಥಗಳ ಕನ್ನಡ ಅನುವಾದ ಕಾರ್ಯವನ್ನೂ ಕೈಕೊಂಡರೆ ಆಸ್ತಿಕ ಶ್ರೋತೃಗಳಿಗೆ ಹೆಚ್ಚು ಸಹಾಯ ವಾಗುವುದು. ಕೇಳಿದ ಪಾಠವನ್ನು ಅನುವಾದಗಳ ಮೂಲಕ ಮೇಲುಕು ಹಾಕಲು ಸಹಾಯ ವಾಗುವುದು. ಪಾಠ ಹೇಳುವ ಯುವ ಪಂಡಿತರಿಗೂ ವಿಷಯಾಂತರಕ್ಕೆ ಹರಿದಾಡಿದೆ. ವಿಷಯಗಳನ್ನು ಶಿಸ್ತಿನಿಂದ ನಿರೂಪಿಸಲು ಸಹಾಯವಾಗುವುದು.

ಗಂಭೀರವಾದ ವಿಷಯಗಳಿಂದ ಕೂಡಿದ ಈ ಉಪನಿಷತ್ತು, ಭಾಷ್ಯ ಮತ್ತು ಖಂಡಾರ್ಥವನ್ನು ಅಚ್ಚುಕಟ್ಟಾಗಿ ಅನುವಾದ ಮಾಡಿದ ಶ್ರೀ ಕೃಷ್ಣಾಚಾರ್ಯ ಉಪಾಧ್ಯಾಯರು ದಶೋಪನಿಷತ್ತುಗಳನ್ನೂ ಈ ರೀತಿಯಾಗಿ ಅನುವಾದ ಮಾಡಲು ಶ್ರೀ ಹರಿವಾಯುಗುರುಗಳು ಶಕ್ತಿ ಮತ್ತು ಪ್ರೇರಣೆಯನ್ನು ದಯಪಾಲಿಸಲೆಂದು ಪ್ರಾರ್ಥಿಸುವೆನು.

ಇದನ್ನು ಪ್ರಕಾಶನ ಮಾಡಿದ ಗುರುರಾಜ ಅಸೋಸಿಯೇಷನ್ (ರಿ.) ಸಂಸ್ಥೆಯೂ ತುಂಬಾ ಅಭಿನಂದನಾರ್ಹವಾದುದು. ಗ್ರಂಥ ಪ್ರಕಾಶನದ ಮೂಲಕ ಜನಸೇವೆಯನ್ನು ಮಾಡುವುದು ಸುತ್ತ್ಯಕಾರ್ಯ.

ಈ ಗ್ರಂಥದ ಪ್ರಕಾಶನಕ್ಕೆ ಧನ ಸಹಾಯ ಮಾಡಿದ ಶ್ರೀ ಎಮ್.ಕೆ. ರಾಘವೇಂದ್ರರಾಯರು ಅನೇಕರಿಗೆ ಗ್ರಂಥಗಳನ್ನು ಒದಗಿಸಿದ ಪುಣ್ಯಕ್ಕೆ ಭಾಗಿಗಳಾಗಿದ್ದಾರೆ. ಜ್ಞಾನದಾನಕ್ಕೆ ಸಹಾಯ ಮಾಡುವುದು ಇನ್ನಿತರ ದಾನಗಳಿಗಿಂತ ಶ್ರೇಷ್ಠವಾದುದು. ಶ್ರೀ ಹರಿವಾಯುಗುರುಗಳು ಅವರಿಂದಲೂ ಇನ್ನೂ ಹೆಚ್ಚಿನ ಸೇವೆಯಾಗುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆನು.

*ಮಹಾಮಹೋಪಾಧ್ಯಾಯ*

**ಪ್ರೊ. ಕೆ.ಟಿ. ಪಾಂಡುರಂಗಿ**

ದ್ವೈತವೇದಾಂತ ಪ್ರತಿಷ್ಠಾನ, ನಿರ್ದೇಶಕರು

# ಪ್ರಕಾಶಕರ ನುಡಿ

ಪ್ರಸ್ತುತ ಚಿತ್ರಭಾನು ಸಂವತ್ಸರದ ಶ್ರೀಗುರುಸಾರ್ವಭೌಮರ ಆರಾಧನಾ ಸಂದರ್ಭದಲ್ಲಿ, ಅವರಿಂದ ವಿರಚಿತ ಉಪನಿಷತ್ ಖಂಡಾರ್ಥಗಳಲ್ಲೊಂದಾದ ಮಾಂಡೂಕೋಪನಿಷತ್ ಖಂಡಾರ್ಥವನ್ನು ಮಧ್ವಭಾಷ್ಯ ಸಮೇತ ಕನ್ನಡ ಅನುವಾದದೊಂದಿಗೆ ಪ್ರಕಟಿಸಬೇಕೆಂದು ಶ್ರೀಹರಿವಾಯುಗುರುಗಳ ಪ್ರೇರಣಾನುಸಾರ ನಿಶ್ಚಯಿಸಿ, ಆಡಳಿತ ಮಂಡಳಿಯು ಗ್ರಂಥಪ್ರಕಾಶನ ಉಪ ಸಮಿತಿಯೊಂದನ್ನು ರಚಿಸಿತು. ಉಪಸಮಿತಿಯವರು ಅದರ ಕನ್ನಡಾನುವಾದ ವನ್ನು ಮಾಡಲು ಜಯತೀರ್ಥ ವಿದ್ಯಾಪೀಠದ ಅಧ್ಯಾಪಕರಾದ ಮ. ಶಾ. ಸಂ. ವಿದ್ವಾನ್ ಕೃಷ್ಣಾಚಾರ್ಯ ಉಪಾಧ್ಯಾಯರನ್ನು ಕೇಳಿದಾಗ ಅವರು ಸಂತೋಷ ದಿಂದ ಒಪ್ಪಿ, ಕನ್ನಡಾನುವಾದ ಮಾಡಿ, ಈ ಗ್ರಂಥವನ್ನು ಸಂಪಾದಿಸಿ ಶ್ರೀಹರಿ ವಾಯುಗುರುಗಳ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಅವರಿಗೆ ಕೃತಜ್ಞತಾಪೂರ್ವಕ ಅನಂತ ನಮಸ್ಕಾರಗಳು.

ಈ ಗ್ರಂಥಪ್ರಕಾಶನಕ್ಕೆ ಅನುಗ್ರಹ ಸಂದೇಶವನ್ನು ನೀಡಿದ ಶ್ರೀಮದುತ್ತರಾದಿ ಮಠಾಧೀಶರಾದ ಪರಮಪೂಜ್ಯ **ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೆ** ಕೃತಜ್ಞತಾಪೂರ್ವಕವಾದ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥದ ಮುದ್ರಣಕ್ಕೆ ಆರ್ಥಿಕ ಸಹಾಯವಿತ್ತ ಶ್ರೀ ಚೈತ್ರ ರಾಘವೇಂದ್ರ ರಾಯರಿಗೆ ಹಾಗೂ ಅವರ ಕುಟುಂಬವರ್ಗಕ್ಕೆ ಶ್ರೀಹರಿವಾಯು ಗುರುಗಳು ವಿಶೇಷವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥ ಪ್ರಕಟಣೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದವರಿಗೆ ಶ್ರೀ ಗುರುರಾಜರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ಈ ಮುದ್ರಣದ ಕಾರ್ಯವನ್ನು ಸುಂದರವಾಗಿ ಅಲ್ಪಕಾಲದಲ್ಲಿ ಸಮರ್ಪಕವಾಗಿ ಮಾಡಿಕೊಟ್ಟ ಮೆ. ವಾಗರ್ಥ, ಬೆಂಗಳೂರು ಇವರಿಗೆ ಅಭಿನಂದನೆಗಳನ್ನು ಸಮರ್ಪಿಸುತ್ತಾ, ಶ್ರೀ ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಮನ್ಮೂಲರಾಮಚಂದ್ರದೇವರಲ್ಲಿ ಈ ಗ್ರಂಥಪುಷ್ಪವನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದೇವೆ.

೧೬. ೦೮. ೨೦೦೨
ಬೆಂಗಳೂರು

ಆಡಳಿತ ಮಂಡಳಿ ಹಾಗೂ ಉಪಸಮಿತಿ ಸದಸ್ಯರು
**ಶ್ರೀಗುರುರಾಜ ಅಸೋಸಿಯೇಷನ್**
ಮಾಡಲ್ ಹೌಸ್ ಬೀದಿ, ಬೆಂಗಳೂರು.

# ಅನುವಾದಕನ ನಾಲ್ಕು ಮಾತುಗಳು

ಉಪನಿಷತ್ತುಗಳು ಅಧ್ಯಾತ್ಮಿಕ ತತ್ತ್ವಜ್ಞಾನದ ಉಗಮಸ್ಥಾನ. ರಹಸ್ಯ ಆಧ್ಯಾತ್ಮಿಕ ವಿದ್ಯೆಯೇ ಉಪನಿಷತ್‌ಶಬ್ದಕ್ಕೆ ಅರ್ಥ. ವೇದದ ಸಾರವೆನಿಸಿರುವ ಉಪನಿಷತ್ತು ಅಮುಖ್ಯವಾಗಿಯೂ ಬೇರೆ ವಿಷಯವನ್ನು ಹೇಳದೇ ಭಗವಂತನನ್ನೇ ಹಾಡುತ್ತಿದೆ.

**ನ ವಿನೋಪನಿಷದ್ಭಿಃ ಸ ಜ್ಞೇಯಃ ಕೇನಾಪಿ ಕಸ್ಯಚಿತ್ ।**
**ಅತ ಔಪನಿಷತ್ಕಂ ತಂ ಪ್ರಾಹುರ್ವಿಷ್ಣುಂ ಸನಾತನಮ್ ॥**

ಎಂದು ಬೃಹದಾರಣ್ಯಕಭಾಷ್ಯದಲ್ಲಿ ಭಗವಂತನನ್ನು ಔಪನಿಷತ್ಪುರುಷ ನೆಂದಿರುವರು. ಉಪನಿಷತ್ತುಗಳಿಲ್ಲದೇ ಅವನನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಕಾರಣ ಈ ಹೆಸರನ್ನು ಭಗವಂತನಿಗೆ ಉಪನಿಷತ್ತೇ ನೀಡಿತು.

**ಉಪನಿಷತ್ ಹಾಗೂ ಭಾಷ್ಯಗಳು ಪೂರ್ಣವೆನಿಸಿವೆ.**

ಇಂತಹ ಉಪನಿಷತ್ತುಗಳು ನೂರಾರು ಅದರಲ್ಲಿಯೂ ಹತ್ತು ಉಪನಿಷತ್ತುಗಳು ಪ್ರಸಿದ್ಧವಾಗಿವೆ. ''ದಶೋಪನಿಷದಃ'' ಎಂಬ ಹೆಸರೇ ಅವುಗಳ ಪೂರ್ಣತೆಯನ್ನು ತಿಳಿಸುತ್ತದೆ. ''ದಶೇತಿ ಸರ್ವಮುದ್ದಿಷ್ಟಂ'' ಸರ್ವಂ ಪೂರ್ಣಮಿಹೋಚ್ಯತೇ ''ದಶ'' ಎಂದರೆ ಸರ್ವ ಎಂದರ್ಥ. ''ಸರ್ವ'' ಎಂದರೆ ಪೂರ್ಣ ಎಂದರ್ಥ. ಈ ಉಪನಿಷತ್ತುಗಳ ಅಧ್ಯಯನ ನಮಗೆ ಪೂರ್ಣತೆಯನ್ನು ತಂದುಕೊಡುತ್ತದೆ. ತಾನೂ ಪೂರ್ಣವಾಗಿದೆ. ಆ ಹೆಸರು ಎಷ್ಟೊಂದು ಪರಿಪೂರ್ಣ! ಸಮಂಜಸ! ಇನ್ನು ಆ ಉಪನಿಷತ್ತುಗಳು ಪೂರ್ಣವೆಂದೇನು ಹೇಳುವ ಪ್ರಮೇಯವಿಲ್ಲ.

ಈ ದಶೋಪನಿಷತ್ತುಗಳಿಗೆ ಶಂಕರಾಚಾರ್ಯರು ವ್ಯಾಖ್ಯಾನಿಸಿದ್ದಾರೆ. ರಾಮಾನುಜಾಚಾರ್ಯರು ಪ್ರತ್ಯೇಕವಾಗಿ ಉಪನಿಷತ್ತುಗಳಿಗೆ ಭಾಷ್ಯ ಬರೆಯದಿದ್ದರೂ ''ವೇದಾಂತ ಸಂಗ್ರಹ'' ಎನ್ನುವ ಗ್ರಂಥದಲ್ಲಿ ಉಪನಿಷತ್ತುಗಳ ಸಾರವನ್ನು ತಿಳಿಸಿದ್ದಾರೆ. ರಾಮಾನುಜ ಮತಾನುಗುಣವಾಗಿ ರಂಗ ರಾಮಾನುಜರು ಉಪನಿಷತ್ತುಗಳಿಗೆ ವ್ಯಾಖ್ಯಾನಿಸಿದ್ದಾರೆ. ಪರಿಪೂರ್ಣವಾದ ದಶೋಪನಿಷತ್ತುಗಳಿಗೆ ಈ ಯಾವ ವ್ಯಾಖ್ಯಾನಗಳು ಪರಿಪೂರ್ಣವೆನಿಸಲಿಲ್ಲ. ಶ್ರೀಮದಾಚಾರ್ಯರು ಈ ಹತ್ತೂ ಉಪನಿಷತ್ತುಗಳಿಗೆ ಭಾಷ್ಯಬರೆದು ಉಪನಿಷತ್ತಿನ ಆಂತರ್ಯವನ್ನು ತಿಳಿಸಿದ್ದಾರೆ. ಅಧ್ಯಾತ್ಮದ ಬಗೆಗೆ ಹೊಸ ಬೆಳಕನ್ನು ಚೆಲ್ಲಿದ್ದಾರೆ.

ಉಪನಿಷತ್ತುಗಳ ಅಧ್ಯಯನ ಪೂರ್ಣವೆನಿಸಬೇಕಾದರೆ - ಋಷಿ, ಛಂದೋ ದೇವತೆಗಳ ಜ್ಞಾನ ಆವಶ್ಯಕ. ಇಲ್ಲವಾದರೆ ಆ ಅಧ್ಯಯನ ಅಪೂರ್ಣ. ಅದು ನಿಷ್ಫಲವೂ ಹೌದು. ಅಷ್ಟೇ ಅಲ್ಲ ಅನರ್ಥವುಂಟು.

''ಪಾಪೀಯಾನ್ ಭವತಿ ತಸ್ಮಾದೇತಾನಿ ಮಂತ್ರೇ ವಿದ್ಯಾತ್'' ಎನ್ನುತ್ತದೆ ಸಾಮವೇದ ಬ್ರಾಹ್ಮಣ. ಈ ಋಷಿ ಛಂದೋದೇವತೆಗಳ ಬಗ್ಗೆ ಹೇಳುವಲ್ಲಿ ಎಲ್ಲರೂ ಎಡವಿದರು. ಶ್ರೀಮದಾಚಾರ್ಯರು ಮಾತ್ರ ಸ್ಪಷ್ಟವಾಗಿ ಯಾವ ಸಂದೇಹಕ್ಕೂ ಅವಕಾಶವಿಲ್ಲದೇ ಋಷಿಛಂದೋದೇವತೆಗಳನ್ನು ನಿರೂಪಿಸಿದರು.

**''ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್''**

ಅಲ್ಪ ಸ್ವಲ್ಪ ಓದಿದವನನ್ನು ಕಂಡು ವೇದ ನಡುಗುತ್ತದೆ. ಇವನು ಇತಿಹಾಸ ಪುರಾಣಗಳನ್ನು ಬಲ್ಲವನಲ್ಲ. ಇವನು ಹೇಗೆ ತಾನೇ ವೇದ, ಉಪನಿಷತ್ತುಗಳನ್ನು ಅರ್ಥೈಸಲು ಸಮರ್ಥ. ಶ್ರೀಮದಾಚಾರ್ಯರು ದಶಪ್ರಮತಿಗಳು, ಅವರ ವ್ಯಾಖ್ಯಾನವೂ ಅಷ್ಟೇ ಪೂರ್ಣ. ಇತಿಹಾಸ ಪುರಾಣಗಳ ಜಾಡಿನಲ್ಲಿ ವೇದ, ಉಪನಿಷತ್ತುಗಳನ್ನು ಅರ್ಥೈಸಿದವರು ಶ್ರೀಮದಾಚಾರ್ಯರೊಬ್ಬರೆ. ಇದು ಅತಿಶಯೋಕ್ತಿಯಲ್ಲ. ಎಲ್ಲ ಉಪನಿಷತ್ತುಗಳನ್ನು ಅರ್ಥೈಸುವಾಗ ಬೇರೆ ಬೇರೆ ಪುರಾಣಗಳ, ಸಂಹಿತೆಗಳ ಇತಿಹಾಸದ ಮಾತುಗಳನ್ನು ಪುಂಖಾನುಪುಂಖವಾಗಿ ಉದ್ಧರಿಸುತ್ತಾರೆ.

ಹೀಗೆ ಶ್ರೀಮದಾಚಾರ್ಯರ ಉಪನಿಷದ್ಭಾಷ್ಯ ಅದೊಂದು ಮಾತ್ರ ಪರಿಪೂರ್ಣ ವ್ಯಾಖ್ಯಾನ. ಅದಿಲ್ಲದಿದ್ದರೆ ಎಲ್ಲವೂ ಅಪೂರ್ಣವೇ.

**ಮಾಂಡೂಕೋಪನಿಷತ್**

ಈ ಉಪನಿಷತ್ತು ಅಥರ್ವಣವೇದಕ್ಕೆ ಸೇರಿದ ಉಪನಿಷತ್ತು. ಮಂಡೂಕರೂಪಿಯಾದ ವರುಣನೇ ಈ ಉಪನಿಷತ್ತಿಗೆ ದ್ರಷ್ಟಾರನಾದ ಋಷಿಯು ವಿಶ್ವ, ತೈಜಸ, ಪ್ರಾಜ್ಞ, ತುರೀಯರೇ ಪ್ರತಿಪಾದ್ಯ ದೇವತೆಗಳು.

ನಾಲ್ಕು ಖಂಡಗಳಲ್ಲಿರುವ ಈ ಚಿಕ್ಕ ಉಪನಿಷತ್ತು ಗದ್ಯಪದ್ಯಗಳಲ್ಲಿದೆ. ಒಂದೊಂದು ಖಂಡದಲ್ಲಿಯೂ ಗದ್ಯಭಾಗದಲ್ಲಿ ಮೊದಲು ಈ ಉಪನಿಷತ್ ಪ್ರತಿಪಾದ್ಯವಾದ ಪ್ರಮೇಯಗಳನ್ನು ವಿವರಿಸಿ ಬಳಿಕ ಬ್ರಹ್ಮದೃಷ್ಟ ಶ್ಲೋಕಗಳಿಂದ ಅವುಗಳನ್ನು ದೃಢಪಡಿಸುತ್ತದೆ.

ಬ್ರಹ್ಮದೃಷ್ಟ ಶ್ಲೋಕಗಳು.

ಈ ಉಪನಿಷತ್ತಿನಲ್ಲಿ ಒಟ್ಟು ಮಂತ್ರಗಳು ನಲವತ್ತು. ಅದರಲ್ಲಿ ವರುಣ ದೃಷ್ಟಮಂತ್ರಗಳು ಹನ್ನೊಂದು. ''ಉಳಿದ ಇಪ್ಪತ್ತೊಂಭತ್ತು ಮಂತ್ರಗಳು ವರುಣನು ಸಂವಾದಿಯಾಗಿ ಹೇಳಿರುವ ಬ್ರಹ್ಮದೃಷ್ಟ ಮಂತ್ರಗಳು. ಇವು ಆಧುನಿಕ ವಿಮರ್ಶಕರು ಹೇಳುವಂತೆ ಗೌಡಪಾದಕಾರಿಕೆಯಲ್ಲ. ಇದರ ಬಗ್ಗೆ ಹಿರಿಯ ವಿದ್ವಾಂಸರಾದ ಶ್ರೀಯುತ ಪ್ರೊ. ಕೆ.ಟಿ. ಪಾಂಡುರಂಗಿಯವರು ವಿಶದವಾಗಿ ತಮ್ಮ ಮುನ್ನುಡಿಯಲ್ಲಿ ಚರ್ಚಿಸಿರುವರು. ಶ್ರೀಮದಾಚಾರ್ಯರೂ ಕೂಡ ಇವು ಬ್ರಹ್ಮದೃಷ್ಟ ಮಂತ್ರಗಳೆಂಬುದನ್ನು

ಪ್ರಮಾಣಸ್ಯ ಪ್ರಮಾಣಂ ಚ ಬಲವದ್ವಿದ್ಯತೇ ಮುನೇ ।
ಬ್ರಹ್ಮದೃಷ್ಟಾನ್ ಯತೋ ಮಂತ್ರಾನ್ ಪ್ರಮಾಣಂ ಸಲಿಲೇಶ್ವರಃ ॥
ಅತ್ರ ಶ್ಲೋಕಾ ಭವಂತೀತಿ ಚಕಾರೈವ ಪೃಥಕ್ ಪೃಥಕ್

*ಇತಿಗಾರುಡೇ*

ಎನ್ನುವ ಗಾರುಡದ ಮೂಲಕ ಸ್ಪಷ್ಟೀಕರಿಸಿರುವರು. ಒಟ್ಟಾರೆ ಚೊಕ್ಕದಾದ ಈ ಉಪನಿಷತ್ತು ಚಿಕ್ಕದೆಂದು ಕಾಣುವ ಓಂಕಾರದ ಬಗ್ಗೆ ಹಾಗೂ ಪ್ರತಿಪಾದ್ಯಾದೇವತೆಗಳ ಬಗ್ಗೆ ಸಾಕಷ್ಟು ವಿವರಣೆಯನ್ನೊದಗಿಸುತ್ತದೆ.

ಭಗವಂತ ಓಂಕಾರದಿಂದ ವಾಚ್ಯನು ಎನ್ನುವುದನ್ನು ಶ್ರೀಮದಾಚಾರ್ಯರು ಬೃಹತ್‌ಸಂಹಿತೆ ಹಾಗೂ ನೈರ್ಗುಣ್ಯದ ಮಾತಿನ ಮೂಲಕ ತಿಳಿಸಿರುವರು. 'ವೈಶ್ವಾನರ' ಎಂದರೆ ಪ್ರಸಿದ್ಧ ಅಗ್ನಿಯಲ್ಲ. ಈ ವೈಶ್ವಾನರ ಭಗವಂತನೆಂಬುವುದನ್ನು

ವಿಶ್ವಂ ಸ್ಥೂಲಂ ಸಮುದ್ದಿಷ್ಟಂ ಸರ್ವಗಮ್ಯತ್ವಹೇತುತಃ ।
ತತ್ಸಂಬಂಧೀ ನರೋಽನಾಶಾದ್ ವೈಶ್ವಾನರ ಉದಾಹೃತಃ ॥

ಎನ್ನುವ ಮಹಾಯೋಗದ ಮಾತಿನಿಂದ, ಸ್ಥೂಲಪದಾರ್ಥಗಳನ್ನು ಭೋಗಿಸುವವನೂ, ನಾಶ ಹೊಂದದಿರುವನು ಎನ್ನುವ ಕಾರಣದಿಂದ ''ವೈಶ್ವಾನರ'' ಭಗವಂತನೇ ಎನ್ನುವುದನ್ನು ಸಾಧಿಸಿರುವರು. ನಾರಾಯಣ ಪಂಡಿತಾಚಾರ್ಯರು ಶ್ರೀಸುಮಧ್ವವಿಜಯದಲ್ಲಿ ಉಪನಿಷದ್ಭಾಷ್ಯಗಳ ಬಗ್ಗೆ ಹೀಗೆನ್ನುವರು —

**ದಶೋಪನಿಷದೋದೇವೀರ್ದೇವಾ ಇವ ಸಮೀಪ್ಸಿತಾಃ ।**
**ಯುಕ್ತಾಃ ಪ್ರಾಸಾದಯಂತ್ಯರ್ಥಾ ಯೇಷು ಭಾಷ್ಯಾಲಯೇಷ್ವಾಲಮ್ ॥**

ದೇವಸ್ತ್ರೀಯರನ್ನು ದೇವತೆಗಳು ಪ್ರಸನ್ನಗೊಳಿಸುವಂತೆ ಭಾಷ್ಯಾರ್ಥಗಳು ಉಪನಿಷತ್‌ಗಳನ್ನು ಸುಖವಾಗಿ ನಮಗೆ ತಿಳಿಸುತ್ತವೆ.

ಶ್ರೀಮದಾಚಾರ್ಯರ ಭಾಷ್ಯದ ಮಹತಿ ಅವುಗಳನ್ನು ಓದಿದಾಗ ಮುಂದೆ ನಮಗೆ ಅನುಭವ ಗೋಚರವಾಗುವುದು. ನನ್ನ ನಾಲ್ಕು ಶಬ್ದಗಳಲ್ಲಿ ಹಿಡಿಯಲು ಸಾಧ್ಯವಿಲ್ಲ.

ಉಪನಿಷತ್ತು ಸೃಷ್ಟಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಭಗವಂತನ ಸೃಷ್ಟಿಯೇಕೆ? ಪ್ರಯೋಜನವಿದೆಯೇ? ಇತ್ಯಾದಿ ಎಲ್ಲ ಪ್ರಶ್ನೆಗಳನ್ನು ಉತ್ತರಿಸುತ್ತದೆ. ಭಗವಂತನ ಪೂರ್ಣ. ಸೃಷ್ಟಿಯಿಂದ ಭಗವಂತನಿಗೆ ಪ್ರಯೋಜನವಿಲ್ಲ. ಇದೊಂದು ಅವನ ಸ್ವಭಾವ. ಈ ಮಾತನ್ನು ಹರಿವಂಶ ಹೀಗೆ ವಿವರಿಸುತ್ತವೆ —

**ತಸ್ಯಾಪಿ ವಿಷ್ಣೋಃ ಸೃಷ್ಟಿಂತು ಕೇಚಿದಾಹುರನೈಪುಣಾಃ ।**
**ಅತೃಪ್ತಸ್ಯೈವ ಭೋಗಾರ್ಥಂ, ಕ್ರೀಡಾರ್ಥಂ ತು ವಿಪಶ್ಚಿತಃ ।**
**ಸಾಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥**

ಒಟ್ಟಾರೆ ನಾಲ್ಕೂ ಖಂಡಗಳಲ್ಲಿ ನಾಲ್ಕು ರೂಪಗಳನ್ನು ಹೇಳಿ ಈ ನಾಲ್ಕು ರೂಪಗಳು ಸಮಸ್ತ ಓಂಕಾರದಿಂದ ಹಾಗೂ ವ್ಯಸ್ತವಾದ ಅ, ಉ, ಮ ಮತ್ತು ನಾದಗಳಿಂದ ಪ್ರತಿಪಾದಿತವಾಗಿವೆಯೆಂಬುದನ್ನು ಪ್ರತಿಪಾದಿಸಿದೆ. ಅದರ ಜ್ಞಾನದಿಂದ ಆಗುವ ಫಲವನ್ನು ಹೇಳಿದೆ.

**ಖಂಡಾರ್ಥ —**

ಶ್ರೀ ರಾಘವೇಂದ್ರತೀರ್ಥರ ಖಂಡಾರ್ಥದ ವೈಶಿಷ್ಟ್ಯವು ಅನೇಕ ತೆರನಾಗಿದೆ.

ವೇದಾಂತದಲ್ಲಿ ಪ್ರವೇಶ ಮಾಡುವ ಪ್ರಾಥಮಿಕ ಹಂತದ ಓದುಗನಿಗೆ ಸರಳ ಶೈಲಿಯಲ್ಲಿ ಮಂತ್ರಾರ್ಥ ತಿಳಿಸಿಕೊಡುವ ಮೂಲಕ ಗುರುಸಾರ್ವಭೌಮರು ಉಪಕರಿಸುವುದಲ್ಲದೇ ಭಾಷ್ಯಟೀಕಾದಿಗ್ರಂಥಗಳಲ್ಲಿ ಅಡಕವಾದ ಪ್ರಮೇಯವನ್ನೆಲ್ಲ ಕೆಲವೇ ವಾಕ್ಯಗಳಲ್ಲಿ ಸಂಗ್ರಹಿಸಿ ಅದನ್ನು ಮನನ ಮಾಡಲು ಮತ್ತು ನೆನಪಿಡಲು ಪಂಡಿತರಿಗೂ ಸೌಕರ್ಯವನ್ನು ಮಾಡಿ ಮಹದುಪಕಾರ ಮಾಡಿರುವರು.

ಉಪನಿಷತ್ತಿನ ಪಠ್ಯಭಾಗವನ್ನು ವ್ಯಾಖ್ಯಾನಿಸುವಾಗ ಅದರ ಸ್ಪಷ್ಟ ತಿಳಿವಿಗಾಗಿ ಸಂದರ್ಭೋಚಿತವಾಗಿ ಸಂವಾದಿಯಾದ ಬೇರೊಂದು ಶ್ರುತಿಯನ್ನು ಉದಾಹರಿಸಿ ಅದರ ಬೆಳಕಿನಲ್ಲಿ ಪ್ರಕೃತ ವಿಷಯದ ಹೃದಯವನ್ನು ಆವಿಷ್ಕರಿಸುತ್ತಾರೆ.

ಉಪನಿಷತ್ತಿನ ಚಿಂತನೆಯಿಂದ ರೂಪುಗೊಂಡ ಬ್ರಹ್ಮಸೂತ್ರಗಳನ್ನು ಸೂಕ್ತ ಪ್ರಸಂಗದಲ್ಲಿ ಉದಾಹರಿಸಿ ಉಪನಿಷತ್ತುಗಳಲ್ಲಿ ವ್ಯಾಖ್ಯಾನ-ವಾಕ್ಯೇಯ ಭಾವವನ್ನು ತಿಳಿಸಿಕೊಟ್ಟು ಮೂಲದ ಅರ್ಥಾನುಸಂಧಾನದ ಬಗ್ಗೆ ಹೊಸ ಬೆಳಕು ಚೆಲ್ಲುತ್ತಾರೆ.

ಕೆಲವು ಪ್ರಸಂಗಗಳಲ್ಲಿ ಮೂಲಭಾವದ ಸ್ಫುಟವಾದ ಅರಿವಿಗಾಗಿ ಶ್ರೀಮದಾಚಾರ್ಯರು ಮತ್ತು ಟೀಕಾಕಾರರು ಬೇರೆ ಗ್ರಂಥಗಳಲ್ಲಿ ಪ್ರತಿಪಾದಿಸಿದ ವಿಷಯವನ್ನು ಸಂದರ್ಭೋಚಿತವಾಗಿ ಉದಾಹರಿಸಿ ವ್ಯಾಖ್ಯಾನಿಸಿ ಪ್ರಮೇಯದ ಗಾಂಭೀರ್ಯ ಹಾಗೂ ಅನೇಕ ಮುಖತೆಯನ್ನು ತಿಳಿಸಿಕೊಡುತ್ತಾರೆ. ಕೆಲವೊಮ್ಮೆ ವ್ಯಾಕರಣದ ಸೂತ್ರಗಳ ಅಥವಾ ವಾರ್ತಿಕದ ಉಲ್ಲೇಖದೊಡನೆ ಶಬ್ದ ನಿಷ್ಪತ್ತಿಗಳನ್ನು ತೋರಿಸುವರು.

''ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'' ಎನ್ನುವ ಹದಿನಾಲ್ಕನೇ ಮಂತ್ರದಲ್ಲಿ ಕೇವಲ ಪ್ರಭು ಪದದಿಂದಲೇ ಇತರ ಮತಗಳನ್ನು ನಿರಾಕರಿಸುವುದು ಅವರ ವ್ಯಾಖ್ಯಾನದ ಅನ್ಯಾದೃಶ ಕೌಶಲ್ಯವನ್ನು ತೋರಿಸುತ್ತದೆ.

೧. ಪ್ರಕರ್ಷೇಣ ಭವತಿ ಶಶ್ವದೇಕಪ್ರಕಾರೇಣ ವರ್ತತೇ ಇತಿ ಪ್ರಭುಃ ।

ಪ್ರಕೃಷ್ಟನಾಗಿ ಇರುವನು. ಆದ್ದರಿಂದ ಪ್ರಭು ಇರುವಿಕೆಯಲ್ಲಿ ಪ್ರಕರ್ಷ ಹೆಚ್ಚುಗಾರಿಕೆ ಎಂದರೆ ನಿರ್ವಿಕಾರನಾಗಿ ಯಾವಾಗಲೂ ಒಂದೇ ರೀತಿ ಇರುವುದು. ಈ ನಿರ್ವಚನದಂತೆ ನಿರ್ವಿಕಾರನಾದ ಪ್ರಭು ಜಗತ್ತಾಗಿ ವಿಕಾರಗೊಳ್ಳುವವನಲ್ಲ ಎಂದು ತಿಳಿಯುತ್ತದೆ. ಇದರಿಂದ ಪರಿಣಾಮವಾದದ ನಿರಾಕರಣೆಯಾಗುವುದು.

೨. ಪ್ರಭವತಿ ಸಮರ್ಥೋ ವರ್ತತೇ ಇತಿ ಪ್ರಭುಃ ।

ಸಮರ್ಥನಾಗಿರುವನು. ಪೂರ್ಣಶಕ್ತಿಯುಳ್ಳವನು. ಆದ್ದರಿಂದ ಪ್ರಭು ಸತ್ಯವಾದ ವಿಶ್ವವನ್ನೇ ಸೃಷ್ಟಿ ಮಾಡಲು ಸಮರ್ಥನಾದ ಪ್ರಭು ಮಾಯಾಸೃಷ್ಟಿಯನ್ನೇಕೆ ಮಾಡುವನು? ಸೃಷ್ಟಿಯು ಮಾಯಾವಸ್ತು ಸದೃಶ ಎನ್ನುವ ವಾದದ ನಿರಾಕರಣೆ ಈ ನಿರ್ವಚನದಿಂದ ಆಗುವುದು.

೩. ಪ್ರಕರ್ಷೇಣ ಭವತಿ ಅನುಭವತಿ ಅಖಿಲಮಿತಿ ಪ್ರಭುಃ ।

ಎಲ್ಲವನ್ನು ಯಥಾರ್ಥವಾಗಿ ನೋಡಿ ತಿಳಿದಿರುವನಾದುದರಿಂದ ಪ್ರಭು. ಎಲ್ಲವನ್ನೂ ಬಲ್ಲ ಪ್ರಭುವಿಗೆ ಭ್ರಮೆ ಬರಲು ಸಾಧ್ಯವೇ ? ಅವನ ಸೃಷ್ಟಿ ಸ್ವಾಪ್ನ ಪದಾರ್ಥಗಳಂತೆ ಮಿಥ್ಯೆ ಎಂಬ ವಿಚಾರವೂ ಸರಿಯಲ್ಲ.

ಈ ರೀತಿ ಪ್ರಭುಪದದ ನಿರ್ವಚನದಿಂದಲೇ ಪರಿಣಾಮದ ವಿವರ್ತ-ವಾದ ಮಾಯಾಸರೂಪತ್ವವಾದಗಳು ನಿರಾಕರಣೆಯಾಗುವ ಬಗೆಯನ್ನು ಶ್ರೀ ರಾಘವೇಂದ್ರತೀರ್ಥರು ಸುಂದರವಾಗಿ, ಸರಳವಾಗಿ ತೋರಿಸಿರುವರು. ಇದು ಒಂದು ಉದಾಹರಣ ಮಾತ್ರ.

ಓದುಗರ ಅನುಕೂಲಕ್ಕಾಗಿ ಉಪನಿಷತ್ತು ಮತ್ತು ಭಾಷ್ಯವನ್ನು ಕೊಟ್ಟು ಭಾಷ್ಯವನ್ನು ಅನುವಾದಿಸಿ ಆಮೇಲೆ ಖಂಡಾರ್ಥವನ್ನು ಕೊಟ್ಟು ಅದರ ಅನುವಾದವನ್ನು ನೀಡಲಾಗಿದೆ. ಖಂಡಾರ್ಥದ ಹಿನ್ನೆಲೆಯಲ್ಲಿ ಉಪನಿಷದರ್ಥ-ವನ್ನು ಕೊಡುವ ಪ್ರಯತ್ನ ಮಾಡಿರುವೆ. ಕೆಲವು ವಿಶೇಷಗಳಿಗೆ "ವಿವರಣೆ" ಎಂಬ ಶೀರ್ಷಿಕೆಯಡಿಯಲ್ಲಿ ವಿವರಣೆಯನ್ನು ನೀಡಿದೆ.

ಉಪನಿಷತ್ತು ಭಾಷ್ಯ ಹಾಗೂ ಖಂಡಾರ್ಥಗಳ ಕನ್ನಡಾನುವಾದವನ್ನು ಶ್ರೀಹರಿವಾಯುಗುರುಗಳ ಪ್ರೇರಣಾನುಸಾರ ಯಥಾಶಕ್ತಿ ಪ್ರಾಮಾಣಿಕವಾಗಿ ಮಾಡಲಾಗಿದೆ.

ಈ ಪುಸ್ತಕಕ್ಕೆ ಶ್ರೀಮದುತ್ತರಾದಿ ಮಠಾಧೀಶರಾದ ಪರಮ ಪೂಜ್ಯ ಕುಲಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಅನುಗ್ರಹ ಸಂದೇಶ ನೀಡಿ ಆಶೀರ್ವದಿಸಿರುವುದು ನನ್ನ ಭಾಗ್ಯವೇ ಸರಿ.

ಪೂಜ್ಯ ಶ್ರೀಪಾದಂಗಳವರು ತಮ್ಮ ಗುರುಗಳು ಸ್ಥಾಪಿಸಿದ ಜಯತೀರ್ಥ ವಿದ್ಯಾಪೀಠದಲ್ಲಿ ಈಗಾಗಲೇ ಅನೇಕ ಯುವ ವಿದ್ವಾಂಸರನ್ನು ತಯಾರು ಮಾಡಿ ಸಾಧಕ ಪ್ರಪಂಚಕ್ಕೆ ನೀಡಿರುವರು. ಶ್ರೀಗಳವರು ತಮ್ಮ ಈ ಚಿಕ್ಕ ವಯಸ್ಸಿನಲ್ಲಿಯೇ ಸಾಮಾಜಿಕವಾಗಿ ಆಧ್ಯಾತ್ಮಿಕವಾಗಿ ಸೇವೆಗೈಯ್ಯುತ್ತಾ ಚಿರಪರಿಚಿತರಾಗಿರುವರು. ಈ ಗುರುಗಳು ನನ್ನ ಮೇಲೆ ನಿರ್ವ್ಯಾಜವಾದ ಅಭಿಮಾನದಿಂದ ಅನುಗ್ರಹಿಸುತ್ತಿರುವರು. ನನ್ನ ಏಳಿಗೆಗೆ ಎಲ್ಲ ವಿಧ ಪ್ರೋತ್ಸಾಹವನ್ನು ನೀಡುತ್ತಿರುವ ಈ ಮಹಾಗುರುಗಳಿಗೆ ಅನಂತಸಾಷ್ಟಾಂಗ ಪ್ರಣಾಮಗಳ ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ನನಗೆ ರಾಮ ಶಬ್ದದಿಂದ ಆರಂಭಿಸಿ ಸುಧಾಂತ ಅಧ್ಯಯನ ಮಾಡಿಸಿದ ಸ್ವರೂಪೋದ್ಧಾರಗೈಯ್ದ ಪರಮಪೂಜ್ಯ ಹಿಂದಿನ ಶ್ರೀಪಾದರ ಪೂರ್ವಾಶ್ರಮ ಪುತ್ರರೂ, ವಿದ್ಯಮಾನ ಶ್ರೀಪಾದರ ಪೂರ್ವಾಶ್ರಮ ಪಿತೃಚರಣರೆನಿಸಿರುವ ಸುಧಾವಿಶಾರದರಾದ ಶ್ರೀಗುತ್ತಲಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಈ ಚಿಕ್ಕ ಹೊತ್ತಿಗೆಗೆ ತಮ್ಮ ಸುಂದರವಾದ ಶೈಲಿಯಲ್ಲಿ ಮುನ್ನುಡಿ ನೀಡಿರುವ, ಎಲ್ಲ ಪೀಠಾಧಿಪತಿಗಳಿಗೂ ಪ್ರಿಯರಾದ, ಹಿರಿಯ ವಿದ್ವಾಂಸರಾದ ಶ್ರೀಯುತ ಪ್ರೊ. ಕೆ.ಟಿ. ಪಾಂಡುರಂಗಿಯವರಿಗೆ ನನ್ನ ನಮನಗಳನ್ನು ಸಲ್ಲಿಸುವೆನು. ನನಗೆ ಈ ಸಾಧನ ಶರೀರವನ್ನಿತ್ತು, ನನ್ನನ್ನು ಸಾಧನ ಮಾರ್ಗಕ್ಕೆ ತೊಡಗಿಸಿದ ಪೂಜ್ಯರಾದ ಪಿತೃಪಾದರಿಗೆ (ಶ್ರೀ ಪ್ರಲ್ಹಾದಾಚಾರ್ಯ ಉಪಾಧ್ಯಾಯ, ದಿವಾನ ಉತ್ತರಾದಿ ಮಠ) ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುವೆನು. ಗುರುಸಾರ್ವಭೌಮರ ಆರಾಧನೆಯ ಸಂದರ್ಭದಲ್ಲಿ ಈ ಪುಸ್ತಕವನ್ನು ಪ್ರಕಾಶನ-ಗೊಳಿಸುತ್ತಿರುವ ಬೆಂಗಳೂರಿನ ಎನ್.ಆರ್. ಕಾಲೋನಿಯಲ್ಲಿರುವ ಗುರುರಾಜ ಅಸೋಸಿಯೇಷನ್ (ರಿ.) ಇವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸುವೆನು.

ಈ ಗ್ರಂಥ ಪ್ರಕಟಣೆಗೆ ಸಹಾಯ ನೀಡಿದ ಶ್ರೀ ಚೈತ್ರ ರಾಘವೇಂದ್ರ ರಾವ್ ಇವರಿಗೆ ಹರಿವಾಯುಗಳು ವಿಶೇಷವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಶ್ರೀರಾಘವೇಂದ್ರಗುರುಸಾರ್ವಭೌಮರ ಹಾಗೂ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮತ್ತು ಸರ್ವೋತ್ತಮನಾದ ಶ್ರೀಹರಿಯ ಪ್ರೇರಣಾನುಸಾರ ಈ ಕನ್ನಡಾನುವಾದವನ್ನು ರಚಿಸಿರುವೆನು. ಈ ಅನುವಾದವು ಮಾಂಡೂಕೋಪನಿಷತ್ತನ್ನು ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಉಪಕಾರವಾಗಬಹುದೆಂದು ಭಾವಿಸಿದ್ದೇನೆ. ಓದುಗರು ಹಂಸಕ್ಷೀರನ್ಯಾಯದಿಂದ ಗುಣವನ್ನು ಸ್ವೀಕರಿಸಬೇಕು. ಈ ನನ್ನ ಪುಟ್ಟ ಕೃತಿಯು ಸಜ್ಜನರಿಗೆ ಮೋದವನ್ನುಂಟು ಮಾಡಲಿ ಎಂದು ಹರಿವಾಯುಗಳನ್ನು ಪ್ರಾರ್ಥಿಸುತ್ತೇನೆ.

ಶ್ರೀಕೃಷ್ಣಾರ್ಪಣಮಸ್ತು

ಸಜ್ಜನವಿಧೇಯ

೧೭-೮-೨೦೦೨ **ಕೃಷ್ಣಾಚಾರ್ಯ ಉಪಾಧ್ಯಾಯ**

ಬೆಂಗಳೂರು-೪ ಜಯತೀರ್ಥ ವಿದ್ಯಾಪೀಠ

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವಾಯ ನಮಃ

# ಮಾಂಡೂಕೋಪನಿಷತ್

## ಭಾಷ್ಯ ಹಾಗೂ ಖಂಡಾರ್ಥ ಸಹಿತ.

ಹರಿಃ ಓಂ

## ಅಥ ಪ್ರಥಮಃ ಖಂಡಃ

### ಉಪನಿಷತ್

"ಓಂಕಾರ ಪ್ರತಿಪಾದ್ಯನಾದ ಭಗವಂತನ ಉಪಾಸನೆ"

**ಓಮಿತ್ಯೇತದಕ್ಷರಮಿದಂ ಸರ್ವಂ । ತಸ್ಯೋಪವ್ಯಾಖ್ಯಾನಂ**
**ಭೂತಂ ಭವದ್ ಭವಿಷ್ಯದಿತಿ ॥ ೧ ॥**

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ ಭಾಷ್ಯಂ

**ಪೂರ್ಣಾನಂದಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಮ್ ।**
**ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಮ್ ॥**

***ಅನುವಾದ*** — *ಪರಿಪೂರ್ಣವಾದ ಆನಂದ, ಜ್ಞಾನ ಹಾಗೂ ಶಕ್ತಿಯೇ ಸ್ವರೂಪವಾಗಿ ಉಳ್ಳವನು. ನಿತ್ಯನು. ವಿಕಾರರಹಿತನು. ಪ್ರತಿಯೊಬ್ಬರ ದೇಹದಲ್ಲಿ ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರ್ಯ ಎಂಬ ನಾಲ್ಕು ರೂಪಗಳಿಂದ ಬಾಹ್ಯ ಹಾಗೂ ಆಂತರಿಕ ಪದಾರ್ಥಗಳ ಸಾರಭಾಗಗಳನ್ನೆಲ್ಲ ಭೋಗಿಸುವವನು. ಇಂತಹ ಸರ್ವೋತ್ತಮನಾದ, ಜ್ಞಾನಿಗಮ್ಯನಾದ ಶ್ರೀವಿಷ್ಣುವನ್ನು ನಮಿಸುವೆನು.*

ಭಾಷ್ಯಂ

**ಮಂಡೂಕರೂಪಿಣಾ ವರುಣೇನ ಚತೂರೂಪೋ ನಾರಾಯಣಃ ಸ್ತೂಯತೇ ।**

**ಧ್ಯಾಯನ್ನಾರಾಯಣಂ ದೇವಂ ಪ್ರಣವೇನ ಸಮಾಹಿತಃ ।**
**ಮಂಡೂಕರೂಪೀ ವರುಣಸ್ತುಷ್ಟಾವ ಹರಿಮವ್ಯಯಂ ॥ ಇತಿ ಪಾದ್ಮೇ ।**

*ಅನುವಾದ* — *ಕಪ್ಪೆಯರೂಪದವರುಣನು ವಿಶ್ವಾದಿನಾಲ್ಕು ರೂಪಗಳ-ನ್ನೊಳಗೊಂಡ ಶ್ರೀಮನ್ನಾರಾಯಣನನ್ನು ಈ ಉಪನಿಷನ್ಮಂತ್ರಗಳಿಂದ ಸ್ತುತಿಸುತ್ತಾನೆ. 'ಕಪ್ಪೆಯ ರೂಪದಲ್ಲಿದ್ದ ವಿರಕ್ತನಾದ ವರುಣನು ನಾಶರಹಿತನಾದ ನಾರಾಯಣನನ್ನು ಧ್ಯಾನಿಸುತ್ತಾ ಪ್ರಣವದಿಂದ ಪ್ರಾರಂಭವಾಗುವ ಉಪನಿಷತ್ತಿನಿಂದ ಸ್ತುತಿಸಿದನು' ಎಂದು ಪಾದ್ಮಪುರಾಣದಲ್ಲಿ ಹೇಳಿದೆ.*

ಭಾಷ್ಯಂ

ಓಮಿತ್ಯುಕ್ತಂ ತು ಯದ್ ಬ್ರಹ್ಮ ತದಕ್ಷರಮುದಾಹೃತಂ ।
ಓತಮತ್ರ ಜಗದ್ಯಸ್ಮಾದೋಂ ತಸ್ಮಾದ್ ಭಗವಾನ್ ಹರಿಃ ॥
ತದಿದಂ ಗುಣಪೂರ್ತ್ಯೈವ ಸರ್ವಮಿತ್ಯೇವ ಶಬ್ದಿತಂ ।
ಭಾವಿಭೂತಭವತ್ಕಾಲೇಷ್ವೇಕರೂಪತಯಾ ಹರಿಃ ॥
ಸರ್ವದಾ ನಿತ್ಯ ಇತ್ಯೇಷಾ ವ್ಯಾಖ್ಯೋಂಕಾರಸ್ಯ ಕೀರ್ತಿತಾ ।
ಇತಿ ಬೃಹತ್ಸಂಹಿತಾಯಾಂ ।

*ಅನುವಾದ* — *ಓಂ ಎನಿಸಿದ ಪರಬ್ರಹ್ಮನೇ ಅಕ್ಷರನೆನಿಸಿದ್ದಾನೆ. ಅವನಲ್ಲಿ ಜಗತ್ತು ಪ್ರವೇಶಿಸಿರುವುದರಿಂದ ಅವನು ಓಂ ಎನಿಸಿರುವನು. ಗುಣಪೂರ್ಣ-ನಾದುದರಿಂದ ಸರ್ವ ಎಂದೂ ಇವನಿಗೆ ಹೆಸರಿದೆ. ಭೂತ, ಭವಿಷ್ಯದ್ ವರ್ತಮಾನಕಾಲಗಳಲ್ಲೂ ಯಾವುದೇ ವಿಕಾರಕ್ಕೊಳಗಾಗದೆ ಸರ್ವದಾ ನಿತ್ಯನಾಗಿರುವುದೇ, ಶ್ರೀಹರಿಯು ಓಂ ಎಂದೂ ಅಕ್ಷರನೆಂದೂ ಎನಿಸಲು ಕಾರಣ. ಹೀಗೆಂದು ಬೃಹತ್ಸಂಹಿತೆಯಲ್ಲಿದೆ.*

## ಶ್ರೀರಾಘವೇಂದ್ರಯತಿವಿರಚಿತಃ ಮಾಂಡೂಕೋಪನಿಷತ್‌ಖಂಡಾರ್ಥಃ

ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ವಿಶ್ವಾದಿಚತುರಾತ್ಮನೇ ॥

ಅಸ್ಯಾ ಉಪನಿಷದೋ ಮಂಡೂಕರೂಪೀ ವರುಣ ಋಷಿಃ । ಚತೂರೂಪೀ ಹರಿರ್ದೇವತಾ । ಕೇಷಾಂಚಿಚ್ಛಂದೋಬಧ್ಧಾನಾಮಕ್ಷರಗಣನಯಾ ಅನುಷ್ಟುಪ್‌ಛಂದಸ್ತ್ವಂ ಜ್ಞೇಯಮ್ । ಮುಮುಕ್ಷೋರಧಿಕಾರಿಣೋಽಖಿಲಕ್ಲೇಶನಿವೃತ್ತಿವಿಶಿಷ್ಟಪರಮಾನಂದಾ-ವಾಪ್ತಯೇ । ಸಮಸ್ತವ್ಯಸ್ತಪ್ರಣವಪ್ರತಿಪಾದ್ಯಭಗವದುಪಾಸನಾಂ ವಕ್ತುಂ ಪ್ರವೃತ್ತೇಯ-

ಮುಪನಿಷತ್ । ಆದೌ ಸಮಸ್ತ ಪ್ರಣವಪ್ರತಿಪಾದ್ಯಂ ತಾವದಾಹ - ಓಮಿತ್ಯಾದಿನಾ ಅಯಮಾತ್ಮಾ ಬ್ರಹ್ಮ ಇತ್ಯಂತೇನ ।

ಏತದಿತಿ ಶ್ರವಣಾತ್ ಯದಿತ್ಯನ್ವೇತಿ । ಓಮಿತಿ । ಉಕ್ತಮಿತಿ ಶೇಷಃ । ಓತಂ ಜಗದಸ್ಮಿನ್ನಿತಿ ವ್ಯುತ್ಪತ್ತ್ಯಾ ಓಮಿತ್ಯುಕ್ತಂ ಯದ್ ಬ್ರಹ್ಮ ಏತದಕ್ಷರಮುಚ್ಯತೇ । ಇದಮಕ್ಷರಂ ಸರ್ವಂ ಗುಣಪೂರ್ಣಮ್ । ಕೇನ ನಿಮಿತ್ತೇನ ಓಂಕಾರವಾಚ್ಯಂ ಬ್ರಹ್ಮಾಕ್ಷರಮಿತ್ಯುಚ್ಯತೇ ಇತ್ಯತೋ ನ ಕ್ಷರತಿ ಕಾಲತ್ರಯೇಽಪೀತಿ ವ್ಯುತ್ಪತ್ತ್ಯಾ ಕಾಲತ್ರಯೇಽಪ್ಯೇಕಪ್ರಕಾರತಯಾ ನಿತ್ಯತ್ವಹೇತುನೇತಿ ಭಾವೇನ ಪ್ರತಿಜ್ಞಾಪೂರ್ವಕಂ ಪ್ರವೃತ್ತಿನಿಮಿತ್ತಮಾಹ - ತಸ್ಯೇತಿ । ವಿಶಿಷ್ಯಾಖ್ಯಾಯತೇಽನೇನೇತಿ ವ್ಯಾಖ್ಯಾನಂ, ಪ್ರವೃತ್ತಿನಿಮಿತ್ತಮ್ । ತಸ್ಯ ಓಮಿತ್ಯಕ್ಷರಪ್ರತಿಪಾದ್ಯಸ್ಯಾಕ್ಷರಶಬ್ದಾರ್ಥತ್ವೇ ಉಪಪನ್ನಂ ವ್ಯಾಖ್ಯಾನಮುಚ್ಯತ ಇತ್ಯರ್ಥಃ । ತತ್ ಕಿಮಿತ್ಯತ ಆಹ - ಭೂತಮಿತಿ । ಓಮಿತ್ಯುಕ್ತಂ ಬ್ರಹ್ಮ, ಭೂತಂ ಅತೀತಕಾಲೇ ವಿದ್ಯಮಾನಂ, ಭವದ್ವರ್ತಮಾನಕಾಲೇ ಸತ್, ಭವಿಷ್ಯತ್ ಆಗಾಮಿಕಾಲೇಽಪಿ ಸತ್, ಶಶ್ವದೇಕಪ್ರಕಾರಮಿತಿ ಯಾವತ್ । ಅತೋಽಕ್ಷರಮುಚ್ಯತ ಇತ್ಯರ್ಥಃ । ಇತಿಶಬ್ದಸ್ಯ ಉಪವ್ಯಾಖ್ಯಾನಮಿತಿ ಪೂರ್ವೇಣಾನ್ವಯಃ ॥ ೧ ॥

*ಅನುವಾದ - ಸಮಸ್ತ ಕಲ್ಯಾಣ ಗುಣಪೂರ್ಣನೂ, ದೋಷರಹಿತನೂ, ಲಕ್ಷ್ಮೀಪತಿಯೂ, ಮುಖ್ಯಪ್ರಾಣನಿಗೆ ಸ್ವಾಮಿಯೂ ಆದ ವಿಶ್ವ, ತೈಜಸ, ಪ್ರಾಜ್ಞ, ತುರೀಯವೆಂಬ ನಾಲ್ಕು ರೂಪನಾದ ಶ್ರೀಹರಿಯನ್ನು ನಮಿಸುತ್ತೇನೆ.*

*ಈ ಉಪನಿಷತ್ತಿಗೆ ಕಪ್ಪೆಯ ರೂಪನಾದ ವರುಣನು ಋಷಿಯು ಆದ್ದರಿಂದ ಇದನ್ನು ಮಾಂಡೂಕೋಪನಿಷತ್ ಎಂದು ಕರೆದರು. ವಿಶ್ವಾದಿನಾಲ್ಕುರೂಪನಾದ ಶ್ರೀಹರಿಯು ಪ್ರತಿಪಾದ್ಯನು. ಛಂದೋಬದ್ಧವಾದ ಕೆಲವು ಮಂತ್ರಗಳು ಅನುಷ್ಟುಪ್ ಛಂದಸ್ಸಿನವುಗಳು. ಮೋಕ್ಷಾಪೇಕ್ಷಿಯಾದ ಅಧಿಕಾರಿಗೆ ದುಃಖನಿವೃತ್ತಿ ಮತ್ತು ಆನಂದ ಪಡೆಯುವುದಕ್ಕೆ ಇಡಿಯಾದ ಹಾಗೂ ಬಿಡಿ ಬಿಡಿಯಾದ ಪ್ರಣವ ಪ್ರತಿಪಾದ್ಯನಾದ ಶ್ರೀಹರಿಯ ಉಪಾಸನೆಯನ್ನು ಹೇಳಲು ಈ ಮಾಂಡೂಕೋಪನಿಷತ್ ಹೊರಟದೆ. ಅದರಲ್ಲಿಯೂ ಮೊಟ್ಟಮೊದಲಿಗೆ ಇಡಿಯಾದ ಓಂಕಾರದಿಂದ ಪ್ರತಿಪಾದ್ಯನಾದ ಭಗವಂತನನ್ನು ಹೇಳುತ್ತದೆ.*

*ಎಲ್ಲ ಜಗತ್ತು ಶ್ರೀಹರಿಯನ್ನು ಆಶ್ರಯಿಸಿದೆ. ಕಾರಣ ಭಗವಂತನು ಓಂ ನಾಮಕನು. ಓಂ ಎಂದು ಕರೆಸಿಕೊಳ್ಳುವ ಬ್ರಹ್ಮನು ''ನಕ್ಷರತಿ' ಎಂಬ ವ್ಯುತ್ಪತ್ತಿಯಿಂದ ಕಾಲತ್ರಯದಲ್ಲಿಯೂ ಏಕಪ್ರಕಾರನಾಗಿರುವುದರಿಂದ ಅಕ್ಷರನು. ಈ ಅಕ್ಷರನು 'ಸರ್ವಂ' ಅಂದರೆ ಗುಣಪೂರ್ಣನು. ಅಕ್ಷರ ಸ್ವರೂಪವು ಹಿಂದೆಯೂ ಇತ್ತು, ಈಗಲೂ ಇದೆ, ಮುಂದೆಯೂ ಇರುತ್ತದ ಎಂದು*

*ಶ್ರುತಿಯೇ ವಿವರಿಸುತ್ತದೆ. ಇಲ್ಲಿ ಕೇವಲ ಕಾಲತ್ರಯಗಳ ಸಂಬಂಧವನ್ನು ಮಾತ್ರ ಸೂಚಿಸುವುದು ಶ್ರುತಿಯ ಅಭಿಪ್ರಾಯವಲ್ಲ. ಇಂಥ ಕಾಲತ್ರಯಸಂಬಂಧ ಜೀವನಿಗೂ ಉಂಟು. ಕಾರಣ ಕಾಲತ್ರಯದಲ್ಲಿ ಏಕರೂಪ ಅಂದರೆ ಕಾಲತ್ರಯಕೃತವಿಕಾರಶೂನ್ಯನು, ಚಿತ್ಪ್ರಕೃತಿ ಪ್ರಳಯದಲ್ಲೂ ವಿಕಾರವಿಲ್ಲದವ-ಳಾದರೂ ಓಂಕಾರ ವಾಚ್ಯನಾದ ಭಗವಂತನ ಅನುಗ್ರಹದಿಂದಲೇ ಅವಳು ಕಾಲತ್ರಯ ವಿಕಾರಗಳನ್ನು ಮೀರಿರುವಳು. ಶಶ್ವದೇಕ ಪ್ರಕಾರನು ಎನ್ನುವುದೇ ಶ್ರುತಿಯ ಅಭಿಪ್ರಾಯ. ಇದೇ ಅಭಿಪ್ರಾಯದಿಂದ ಮುಂದಿನ ಮಂತ್ರದಲ್ಲಿ ತ್ರಿಕಾಲಾತೀತ ಎಂದಿದೆ ॥ ೧ ॥*

ಉಪನಿಷತ್

ಬ್ರಹ್ಮನೇ ಪೂರ್ಣ ಉಳಿದೆಲ್ಲವು ಅಪೂರ್ಣ

**ಸರ್ವಮೋಂಕಾರ ಏವ ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂಕಾರ ಏವ । ಸರ್ವಂ ಹ್ಯೇತದ್ ಬ್ರಹ್ಮ । ಅಯಮಾತ್ಮಾ ಬ್ರಹ್ಮ ॥ ೨ ॥**

ಭಾಷ್ಯಂ

ಓಮಿತ್ಯಾಕ್ರಿಯತೇ ಯಸ್ಮಾದೋಂಕಾರೋಽಸಾವತಃ ಪರಃ ।
ಸರ್ವತ್ವಮಿತಿ ಪೂರ್ಣತ್ವಂ ತನ್ನಾನ್ಯಸ್ಯ ಹರೇಃ ಕ್ವಚಿತ್ । ಇತಿ ನೈರ್ಗುಣ್ಯೇ ।
ಸರ್ವಮೋಂಕಾರ ಏವೇತ್ಯನ್ಯಸ್ಯ ಪೂರ್ಣತ್ವನಿವಾರಣಂ ।
ತ್ರಿಕಾಲಾತೀತತ್ವಂ ಚ ತಸ್ಯೈವ ।
ಪ್ರಕೃತೇರಪಿ ತ್ರಿಕಾಲಾತೀತತ್ವಂ ವಿದ್ಯತ ಇತಿ ಅನ್ಯದಿತಿ ವಿಶೇಷಣಂ ।

'ಪರಮಂ ಯೋ ಮಹದ್ಬ್ರಹ್ಮ' 'ತದೇವ ಬ್ರಹ್ಮ ಪರಮಂ ಕವೀನಾಂ' 'ಪೂರ್ಣಮದಃ ಪೂರ್ಣಮಿದಂ' ಇತ್ಯಾದಿಷು ಪ್ರಸಿದ್ಧಂ ಚ ಬ್ರಹ್ಮಣಃ ಪರಿ-ಪೂರ್ಣತ್ವಮಿತ್ಯಾಹ — ಸರ್ವಂ ಹ್ಯೇತದ್ ಬ್ರಹ್ಮ ಇತಿ ॥

ಶ್ರೀಬ್ರಹ್ಮಾದಿಸಕಲದೇಹೇಷು ಸ್ಥಿತ್ವಾಽಽದಾನಾದಿಕರ್ತಾ ಯೋಽಯಂ ಕಶ್ಚಿತ್ ಪ್ರತೀಯತೇ , ಜೀವಾನಾಂ ಅಸ್ವಾತಂತ್ರ್ಯದರ್ಶನಾತ್ ಸೋಽಪಿ ಸ ಏವೇತಿ ದರ್ಶಯತಿ ಅಯಮಾತ್ಮಾ ಬ್ರಹ್ಮ ॥ ಇತಿ ।

*ಅನುವಾದ* — *ಶ್ರೀಹರಿಯು ಓಂ ಎಂದು ಕರೆಸಿಕೊಳ್ಳಲ್ಪಡುವ ಪ್ರಯುಕ್ತ ಓಂಕಾರ ಎನಿಸಿರುವನು. ಸರ್ವತ್ವ ಎಂದರೆ ಪೂರ್ಣತ್ವ, ಇಂಥಹ ಪೂರ್ಣತ್ವವು*

ಶ್ರೀಹರಿಯನ್ನು ಹೊರತಾಗಿ ಇನ್ನಾರಲ್ಲೂ ಇರಲಾರದೆಂದು ನೈರ್ಗುಣ್ಯವೆಂಬ ಗ್ರಂಥದಲ್ಲಿ ಇದೆ.

'ಸರ್ವಂ ಓಂಕಾರ ಏವ—ಓಂ ಎನಿಸಿದ ಹರಿಯೇ ಪೂರ್ಣನು(ಸರ್ವಂ)' ಎಂದು ಉಪನಿಷತ್ತಿನಲ್ಲಿ ಶ್ರೀಹರಿಗಿಂತ ಇತರರಲ್ಲಿ ಪೂರ್ಣತ್ವವು ಇಲ್ಲ ಎಂದಿದೆ. ಯಚ್ಚ ತ್ರಿಕಾಲಾತೀತಂ ತದಪ್ಯೋಂಕಾರ ಏವ ಎಂದು ಕಾಲತ್ರಯಪ್ರಯುಕ್ತ ವಿಕಾರಶೂನ್ಯನೂ, ಶ್ರೀಹರಿಯೇ ಎನ್ನಲಾಗಿದೆ. ಚಿತ್ಪ್ರಕೃತಿಯೂ ಕಾಲತ್ರಯದ ವಿಕಾರರಹಿತಳಾದುದರಿಂದ ಉಪನಿಷತ್ತಿನಲ್ಲಿ 'ಅನ್ಯತ್' ಎಂಬ ವಿಶೇಷಣವನ್ನು ನೀಡಿ, ಚಿತ್ಪ್ರಕೃತಿಯು ಬ್ರಹ್ಮನಿಗಿಂತ ಭಿನ್ನಳಾಗಿದ್ದು ಕಾಲತ್ರಯದ ವಿಕಾರರಹಿತ-ಳಾಗಿರುವುದು ಓಂ ಎನಿಸಿರುವ ಶ್ರೀಹರಿಯ ಅನುಗ್ರಹದಿಂದ; ಆದ್ದರಿಂದ ಅವಳು ಓಂಕಾರವಾಚ್ಯಳಲ್ಲ , ಎನ್ನಲಾಗಿದೆ.

ಸರ್ವಂ ಹ್ಯೇತದ್ ಬ್ರಹ್ಮ - ಈ ಬ್ರಹ್ಮನು ಪೂರ್ಣನೆಂಬುದು ಪ್ರಸಿದ್ಧ ಎಂಬ ಈ ಉಪನಿಷತ್ತಿನ ವಾಣಿಯು, ಬ್ರಹ್ಮನು ಪೂರ್ಣನಾಗಿರುವುದು 'ಪರಮಂ ಯೋ ಮಹದ್ಬ್ರಹ್ಮ' 'ತದೇವ ಬ್ರಹ್ಮ ಪರಮಂ ಕವೀನಾಂ' 'ಪೂರ್ಣಮದಃ ಪೂರ್ಣಮಿದಂ' ಮೊದಲಾದ ವಾಕ್ಯಗಳಲ್ಲಿ ಪ್ರಸಿದ್ಧವಾಗಿದೆ ಎಂದು ತಿಳಿಸುವುದು.

ಜೀವರಲ್ಲಿ ಅಸ್ವಾತಂತ್ರ್ಯವು ಕಂಡುಬರುವುದರಿಂದ ಲಕ್ಷ್ಮೀದೇವಿ, ಚತುರ್ಮುಖ ಮೊದಲಾದ ಸರ್ವಜೀವರ ದೇಹಗಳಲ್ಲೂ ಸ್ವತಂತ್ರನಾಗಿ ವಿಷಯ ಪದಾರ್ಥಗಳ ಅನುಭವ ಮೊದಲಾದವುಗಳನ್ನು ಮಾಡುವವನಾಗಿ ಒಬ್ಬನಿರಲೇ ಬೇಕೆಂದು ಊಹಿಸುತ್ತೇವೆ. ಅವನೇ ಅಕ್ಷರ ಶಬ್ದ ಹಾಗೂ ಓಂ ಶಬ್ದ ವಾಚ್ಯನಾದ ಶ್ರೀಹರಿ ಎಂಬುದನ್ನು 'ಅಯಮಾತ್ಮಾ ಬ್ರಹ್ಮ' ಎಂಬಲ್ಲಿ ಪ್ರತಿಪಾದಿಸಲಾಗಿದೆ.

ಭಾಷ್ಯಂ

ಪೂರ್ಣಸ್ತು ಹರಿರೇವೈಕೋ ನಾನ್ಯತ್ ಪೂರ್ಣಂ ಕದಾಚನ ।
ವಿನಾ ಚ ಪ್ರಕೃತಿಂ ನಾನ್ಯತ್ ಕಾಲಾತೀತಂ ಪರಾತ್ಮನಃ ॥
ಕಾಲಶ್ಚೈವ ದಿಶೋ ವೇದಾ ಪ್ರಕೃತ್ಯಾತ್ಮಾನ ಈರಿತಾಃ ।
ಅಭಿಮಾನಾತ್ತು ಜೀವಾನಾಂ ನ ಕಾಲಾತೀತತಾ ಭವೇತ್ ।
ಮುಕ್ತಾನಾಮಪಿ ಪೂರ್ವತ್ರ ಕಾಲಸಂಬಂಧ ಈರಿತಃ ।
ಪೂರ್ಣತ್ವಂ ಚ ಸದಾ ವಿಷ್ಣೋಃ ಪ್ರಸಿದ್ಧಂ ಸರ್ವವೇದತಃ ।
ಸೋಽಯಂ ವಿಷ್ಣೂ ರಮಾಬ್ರಹ್ಮರುದ್ರಾನಂತಾದಿಗಃ ಸದಾ ।

ಆದಾನಾದನಕರ್ತೃತ್ವಾದಾತ್ಮಾ ತೇಷಾಮಗೋಚರಃ ।
ಇತಿ ಮಂಡೂಕರೂಪೀ ಸನ್ ದದರ್ಶ ವರುಣಃ ಶ್ರುತಿಂ ॥

ಇತಿ ಹರಿವಂಶೇಷು ।

*ಅನುವಾದ — ಶ್ರೀಹರಿಯೊಬ್ಬನೇ ಪೂರ್ಣನಾಗಿರುವನು. ಇನ್ನಾರೂ ಎಂದೂ ಪೂರ್ಣರಲ್ಲ. ಪರಮಾತ್ಮನನ್ನು ಬಿಟ್ಟರೆ ಚಿತ್ಪ್ರಕೃತಿಯೊಬ್ಬಳೇ ಕಾಲದ ವಿಕಾರಗಳನ್ನು ಮೀರಿ ಇರುವವಳು. ಕಾಲಪ್ರವಾಹ, ಅವ್ಯಾಕೃತಾಕಾಶ ಹಾಗೂ ಐವತ್ತು ವರ್ಣಗಳು ಇವುಗಳೆಲ್ಲವು ಕಾಲಾತೀತಗಳೆ. ಆದರೆ ಇವುಗಳಿಗೆ ಕಾಲಾತೀತತ್ವ, ಭಗವಂತನ ಅನುಗ್ರಹದಿಂದ ಕಾಲಾತೀತಳಾದ ಚೇತನ ಪ್ರಕೃತಿ ಅಭಿಮಾನಿ ನಿಯಾಗಿರುವುದರಿಂದ, ಹೊರತು ಸ್ವತಂತ್ರವಾಗಿ ಕಾಲಾತೀತತ್ವವಿಲ್ಲ. ಆದ್ದರಿಂದ ಇವು ಓಂಕಾರವಾಚ್ಯಗಳಲ್ಲ. ಜೀವಾತ್ಮರು ನಿತ್ಯರಾದರು ದೇಹಾಭಿಮಾನ ಪ್ರಯುಕ್ತವಾಗಿ ಉಚ್ಚತ್ವ, ನೀಚತ್ವ ಮೊದಲಾದ ವಿಕಾರಗಳಿಗೆ ಒಳಗಾಗುವವರೆ ಆದುದರಿಂದ ಅವರೂ ತ್ರಿಕಾಲಾತೀತರಲ್ಲ. ಮುಕ್ತಾತ್ಮರಿಗೂ ಸಂಸಾರಾವಸ್ಥೆಯಲ್ಲಿ ಕಾಲದ ವಿಕಾರವಿದ್ದ ಪ್ರಯುಕ್ತ ತ್ರಿಕಾಲಾತೀತತ್ವ ಕೂಡಲಾರದು. ಶ್ರೀವಿಷ್ಣುವು ಸರ್ವದಾ ಪೂರ್ಣನಾಗಿರುವವನೆಂಬುದು ಸರ್ವವೇದಗಳಲ್ಲೂ ಪ್ರಸಿದ್ಧವಾಗಿದೆ. ಅಕ್ಷರನೆಂದು ಓಂ ಎಂದೂ ಎನಿಸಿರುವ ಶ್ರೀವಿಷ್ಣು ನಮಗೆ ಅಗೋಚರನಾಗಿದ್ದು ರಮಾಬ್ರಹ್ಮಾದಿಗಳಿದ್ದು ಅವರ ಸುಖ ದುಃಖಗಳ 'ಆದಾನ' ಅಂದರೆ ಅನುಭವ ಮತ್ತು 'ಅದನ' ಅಂದರೆ ಇಷ್ಟಾನಿಷ್ಟ ಪದಾರ್ಥ ಭೋಗಗಳನ್ನು ಮಾಡಿಸುತ್ತ ಆತ್ಮಾ ಎನಿಸಿರುವನು. ಹೀಗೆ ಹೇಳುವ ಉಪನಿಷತ್ತನ್ನು ಕಪ್ಪೆಯ ರೂಪದಲ್ಲಿರುವ ವರುಣನು ಕಂಡುಕೊಂಡನು. ಎಂದು ಹರಿವಂಶದಲ್ಲಿ ಹೇಳಿದೆ. ॥ ೨ ॥*

ಖಂಡಾರ್ಥಃ

ಯದಕ್ಷರಸ್ಯ ಸರ್ವಮಿತ್ಯನೇನ ಪೂರ್ಣತ್ವಮುಕ್ತಂ ತದನ್ಯಸ್ಯಾಪ್ಯಸ್ತಿ ಕಿಮಿತ್ಯತೋ ನೇತ್ಯಾಹ - ಸರ್ವಮಿತಿ

ಓಮಿತ್ಯಾಕ್ರಿಯತೇ ಪ್ರತಿಪಾದ್ಯತ ಇತ್ಯೋಂಕಾರಃ, ಕೃಞಃ ಕರ್ಮಣಿ ಘಞ್ಪ್ರತ್ಯಯಃ। ಅಚೋ ಞ್ಣಿತೀತಿ ವೃದ್ಧಿಃ । ಘಞಬಂತಾಃ ಪುಂಸೀತಿ ಪುಲ್ಲಿಂಗತಾ । ಓಮಿತ್ಯುಚ್ಯಮಾನಮಕ್ಷರಮೇವ ಸರ್ವಂ ಪೂರ್ಣಂ, ನತ್ವನ್ಯದಿತ್ಯರ್ಥಃ । ಭೂತಮಿತ್ಯಾದಿನೋಕ್ತಂ ಶಶ್ವದೇಕಪ್ರಕಾರತ್ವರೂಪಕಾಲತ್ರಯಾತೀತತ್ವಮಕ್ಷರಪದ-ಪ್ರವೃತ್ತಿನಿಮಿತ್ತಮಪಿ ನಾನ್ಯಸ್ಯೇತ್ಯಾಹ - ಯಚ್ಚಾನ್ಯದಿತಿ । ಕಾಲತ್ರಯಕೃತವಿಕಾರಹೀನ-ರೂಪಂ ತ್ರಿಕಾಲತೀತಂ ಚ ಯದನ್ಯತ್ ಚಿತ್ಪ್ರಕೃತಿರೂಪಮಸ್ತಿ ತದಪ್ಯೋಂಕಾರ ಏವ ।

ಓಮಿತ್ಯುಚ್ಯಮಾನಾಕ್ಷರಾಖ್ಯಂ ಬ್ರಹ್ಮೈವ । ನ ತತೋಽನ್ಯತ್ ತಾದೃಶಮಸ್ತೀತ್ಯರ್ಥಃ । ಶ್ರೀತತ್ತ್ವೇ ಶಶ್ವದೇಕಪ್ರಕಾರತ್ವರೂಪಂ ಕಾಲತ್ರಯಾತೀತತ್ವಮೀಶಪ್ರಸಾದಾಯತ್ತಂ ನ ಸ್ವತ ಇತಿ ಭಾವಃ । ಯದ್ವಾ, ಯತ್ ಕಾಲತ್ರಯಾತೀತಂ ತದಪ್ಯೋಂಕಾರ ಏವ । ಅನ್ಯಚ್ಚ ಶ್ರೀತತ್ತ್ವಂ ಚ । ತದುಭಯಾನ್ಯತ್ ಕಾಲತ್ರಯಾತೀತಂ ನೇತ್ಯೇವಕಾರಾರ್ಥಃ । ಸರ್ವಮೋಂಕಾರ ಏವ ಇತ್ಯತ್ರೋಂಪದ- ವಾಚ್ಯಬ್ರಹ್ಮಣಃ ಪೂರ್ಣತ್ವಮುಕ್ತಮ್ । ತತ್ ಕುತ ಇತ್ಯಾಶಂಕಾಂ ಪ್ರಮಾಣಸೂಚನೇನ ನಿರಾಹ – ಸರ್ವಂ ಹ್ಯೇತದ್ ಬ್ರಹ್ಮೇತಿ । ಏತದೋಂಪದವಾಚ್ಯಮಕ್ಷರಾಖ್ಯಂ ಬ್ರಹ್ಮ ಸರ್ವಂ ಪೂರ್ಣಂ ಹಿ, 'ಪರಮಂ ಯೋ ಮಹದ್‌ಬ್ರಹ್ಮ', 'ತದೇವ ಬ್ರಹ್ಮ ಪರಮಂ ಕವೀನಾಮ್', 'ಪೂರ್ಣಮದಃ ಪೂರ್ಣಮಿದಮ್' ಇತ್ಯಾದಿಷು ಪ್ರಸಿದ್ಧಮಿತ್ಯರ್ಥಃ । ನನು ಜೀವಾನಾಂ ಹಿತಾಹಿತಕ್ರಿಯಾಸ್ವಸ್ವಾತಂತ್ರ್ಯಾನುಭವೇನ ತೇಷ್ವಪಿ ಕಶ್ಚಿದಸ್ತಿ ನಿಯಂತೇತ್ಯನುಮಿತಸ್ಯಾಪಿ ಗುಣಪೂರ್ತ್ಯಾದೇರಪೇಕ್ಷಣೀಯತ್ವಾತ್ ಕಥಮೋಂಪದವಾಚ್ಯಸ್ಯೈವ ಪೂರ್ಣತ್ವಾ-ದೀತ್ಯತೋಽಯಮೇವ ತತ್ರಾಪಿ ನಿಯಂತಾ ನಾನ್ಯ ಇತ್ಯಾಹ – ಅಯಮಿತಿ । ಶ್ರೀಬ್ರಹ್ಮಾದಿಷ್ವಾದಾನಾದಿಕರ್ತೃತಯಾ ಸ್ಥಿತೋ ಯ ಆತ್ಮಾಽಯಂ ಬ್ರಹ್ಮ ಪ್ರಾಗುಕ್ತ-ಮೋಂಪದವಾಚ್ಯಂ ಬ್ರಹ್ಮೈವ, ನ ತ್ವನ್ಯಃ ಕಶ್ಚಿದಿತ್ಯರ್ಥಃ । ಯೇನ ತಸ್ಯೈವ ಪೂರ್ಣತ್ವಾದೀತ್ಯೇತನ್ನ ಸ್ಯಾದಿತಿ ಭಾವಃ । ಇತಿ ಸಮಸ್ತಪ್ರಣವಪ್ರತಿಪಾದ್ಯೋಕ್ತಿಃ ॥ ೨ ॥

*ಅನುವಾದ – ಅಕ್ಷರನಿಗೆ ಹೇಳಿದ ಗುಣಪೂರ್ಣತ್ವವು ಬೇರೆ ಯಾರಿಗೂ ಇಲ್ಲ ಎಂದು ಹೇಳುತ್ತದೆ – 'ಓಂ' ಎಂದೆನಿಸಿಕೊಳ್ಳುವ ಅಕ್ಷರವೇ ಪೂರ್ಣ. ಉಳಿದದ್ದು ಯಾವುದೂ ಪೂರ್ಣವಲ್ಲ ಎಂದು ಹೇಳಲು ಶ್ರುತಿಯು 'ಏವ' ಕಾರವನ್ನು ಹಾಕಿ 'ಸರ್ವಂ ಓಂಕಾರ ಏವ' ಓಂಕಾರ ಪ್ರತಿಪಾದ್ಯನೇ ಗುಣಪೂರ್ಣ ಎಂದಿತು. ಅಂತೆಯೇ ಉಳಿದವರು ಯಾರೂ ಅಕ್ಷರರೂ ಅಲ್ಲ. ಶಶ್ವದೇಕ-ಪ್ರಕಾರತ್ವವೂ ಕೂಡ ಶ್ರೀಹರಿಯನ್ನು ಬಿಟ್ಟು ಬೇರೆಲ್ಲಿಯೂ ಇಲ್ಲ. ಆದರೆ ಕಾಲತ್ರಯ ವಿಕಾರಶೂನ್ಯವಾದ ಏನು ಚಿತ್ಪ್ರಕೃತಿ ಉಂಟೋ ಅದು ಓಂಕಾರವೇ. ಅಂದರೆ ಶ್ರೀ ಹರಿಯ ಪ್ರಸಾದದಿಂದ ಚಿತ್ಪ್ರಕೃತಿಯಲ್ಲಿ ಶಶ್ವದೇಕಪ್ರಕಾರತಾ ಬಂದಿದೆ ಹೊರತು ಭಗವಂತನಂತೆ ಸ್ವತಂತ್ರವಾಗಿ ಇಲ್ಲ.*

*ಅಥವಾ ಯಾವುದು ಕಾಲತ್ರಯಾತೀತವೋ ಅದೇ ಓಂಕಾರ ಪ್ರತಿಪಾದ್ಯ. 'ಅನ್ಯಚ್ಚ' ಶ್ರೀ ತತ್ತ್ವವಾದರೂ 'ಅನ್ಯದೇವ' ಕಾಲಾತೀತವೂ ಅಲ್ಲ, ಓಂಕಾರ ಪ್ರತಿಪಾದ್ಯವೂ ಅಲ್ಲ. 'ಅನ್ಯತ್' ಎನ್ನುವುದನ್ನು ಮತ್ತೊಮ್ಮೆ ಆವೃತ್ತಿ ಮಾಡಿ 'ಏವ'ಕಾರಕ್ಕೆ ಇಲ್ಲ ಎನ್ನುವ ಅರ್ಥವನಿಟ್ಟುಕೊಂಡು ಹೀಗೆ ಎರಡನೇ ರೀತಿಯಾಗಿ ಅರ್ಥೈಸಿರುವರು.*

ಶ್ರುತಿಸಿದ್ಧವಾದ ಬ್ರಹ್ಮನ ಪೂರ್ಣತೆ.

*ಓಂಕಾರವಾಚ್ಯನಾದ ಬ್ರಹ್ಮನು 'ಪೂರ್ಣನು' ಎನ್ನುವಲ್ಲಿ ಪ್ರಮಾಣ ಹೇಳುವರು - ''ಸರ್ವಂ ಹ್ಯೇತದ್‌ಬ್ರಹ್ಮ'' ಓಂಕಾರವಾಚ್ಯನಾದ ಅಕ್ಷರನಾಮಕ ಬ್ರಹ್ಮನು 'ಸರ್ವಂಹಿ' ಪೂರ್ಣನೆಂದು ''ಪರಮಂ ಯೋ ಮಹದ್‌ಬ್ರಹ್ಮ ತದೇವ ಬ್ರಹ್ಮ ಪರಮಂ ಕವೀನಾಂ'' 'ಪೂರ್ಣಮದಃ ಪೂರ್ಣಮಿದಂ' ಮೊದಲಾದ ವೇದಗಳಲ್ಲಿ ಪ್ರಸಿದ್ಧವಾಗಿದೆ ಎಂದು 'ಹಿ' ಶಬ್ದದಿಂದ ಸ್ಫುಟವಾಗುವುದು.*

*ಎಲ್ಲ ಜೀವರಿಗೂ ತಮ್ಮ ತಮ್ಮ ಹಿತ ಹಾಗೂ ಅಹಿತಗಳ ವಿಷಯದಲ್ಲಿ ಸುಖಬೇಕೆನಿಸಿದಾಗ ದುಃಖವಾಗುವುದು, ದುಃಖನಿವಾರಣೆಯಲ್ಲಿ ಶಕ್ತಿಯಿಲ್ಲ-ದಿರುವುದರಿಂದ ಅಸ್ವಾತಂತ್ರ್ಯ ಕಂಡಿದೆ. ಅಂತಹ ಅಸ್ವತಂತ್ರರಾದ ಜೀವರಿಗೆ ನಿಯಾಮಕರು ಶ್ರೀಬ್ರಹ್ಮಾದಿಗಳು. ಈ ಶ್ರೀಬ್ರಹ್ಮರಿಗೂ ನಿಯಾಮಕನಾಗಿ ಇರುವವನು ಈ ಶ್ರೀಹರಿಯೇ. ಶ್ರೀಬ್ರಹ್ಮಾದಿಗಳಲ್ಲಿ ಆದಾನಾದಿಕರ್ತೃವಾದ್ದರಿಂದ ಇವನು ಆತ್ಮ ನಾಮಕನಾಗಿರುವನು. ಹೀಗೆ ಓಂಕಾರವಾಚ್ಯನಾದ ಬ್ರಹ್ಮನೇ ಗುಣಪೂರ್ಣನಾಗಿದ್ದಾನೆ. ಇವನನ್ನು ಬಿಟ್ಟು ಮಿಕ್ಕವರಾರೂ ಪೂರ್ಣರಲ್ಲ. ಹೀಗೆ ಸಮಸ್ತ ಪ್ರಣವ ಪ್ರತಿಪಾದ್ಯನನ್ನು ಶ್ರುತಿಯೇ ನಿರೂಪಿಸಿತು.*

***ವಿವರಣೆ** : ಓಂಕಾರ ಎನ್ನುವಲ್ಲಿ 'ಓಂ' ಶಬ್ದದಿಂದ ಕರೆಸಿಕೊಳ್ಳಲ್ಪಡುವುದು ಎಂಬ ಕರ್ಮಣಿ ಅರ್ಥದಲ್ಲಿ 'ಘಞ್' ಪ್ರತ್ಯಯವಾಗಿ 'ಅಚೋಽಞ್ಣಿತಿ' ಎಂಬ ಸೂತ್ರದಿಂದ ವೃದ್ಧಿ ಬಂದು, ಓಂಕಾರ ಎನ್ನುವ ರೂಪವಾಗಿದೆ. ಘಞಂತಶಬ್ದ-ವಾದುದರಿಂದ ಪುಲ್ಲಿಂಗವಾಗಿದೆ ॥ ೨ ॥*

ಉಪನಿಷತ್

ಪರಮಾತ್ಮನ ವೈಶ್ವಾನರ ರೂಪ

**ಸೋಽಯಮಾತ್ಮಾ ಚತುಷ್ಪಾತ್ । ಜಾಗರಿತಸ್ಥಾನೋ ಬಹಿಃಪ್ರಜ್ಞಃ । ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಕ್ ವೈಶ್ವಾನರಃ ಪ್ರಥಮಃ ಪಾದಃ ॥ ३ ॥**

ಭಾಷ್ಯಂ

ಚತುರ್ಧಾವಸ್ಥಿತೋ ದೇಹೇ ಪರಮಾತ್ಮಾ ಸನಾತನಃ ।
ವೈಶ್ವಾನರೋ ಜಾಗರಿತಸ್ಥಾನಗೋ ಗಜವಕ್ತ್ರಃ ।
ನಿರ್ಮಾತಾ ಬಾಹ್ಯಸಂವಿತ್ತೇರ್ಜೀವಾನಾಂ ತದಗೋಚರಃ ।

ಅಷ್ಟಾದಶಮುಖಾನ್ಯಸ್ಯ ಪುಮಾಕಾರಾಣಿ ಸರ್ವಶಃ ।
ಮಧ್ಯಮಂ ತು ಗಜಾಕಾರಂ ಚತುರ್ಬಾಹುಃ ಪರಃ ಪುಮಾನ್ ।
ಪಾದೌ ಹಸ್ತಕರೋ ಹಸ್ತಾ ಇತಿ ಸಪ್ತಾಂಗ ಈರಿತಃ ।
ಸ್ಥೂಲಾನ್ ಭೋಗಾನ್ ಇಂದ್ರಿಯೈಃ ಸಶುಭಾನ್ ಭುಂಕ್ತೇ ನ ಚಾಶುಭಾನ್ ।
ವಿಶ್ವಂ ಸ್ಥೂಲಂ ಸಮುದ್ದಿಷ್ಟಂ ಸರ್ವಗಮ್ಯತ್ವಹೇತುತಃ ।
ತತ್ಸಂಬಂಧೀ ನರೋಽನಾಶಾದ್ ವೈಶ್ವಾನರ ಉದಾಹೃತಃ ।
ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ವೈದ್ ಗಜವಕ್ತ್ರತಾಂ ।
ತದ್ವೈವ ತೈಜಸಧ್ಯಾನಾತ್ ತ್ರಿಧ್ಯಾನಾದಿಂದ್ರ ಇಂದ್ರತಾಂ ।
ಚತುರ್ಧ್ಯಾನಾಚ್ಚ ರುದ್ರತ್ವಂ ರುದ್ರ ಆಪ ಜನಾರ್ದನಾತ್ ।
ಏವಂಭೂತಗುಣೋ ವಿಷ್ಣುಶ್ಚತುರಾತ್ಮಾ ಪರಾತ್ಪರಃ ॥

ಇತಿ ಮಹಾಯೋಗೇ ।

*ಅನುವಾದ — ಶಾಶ್ವತನಾದ ಪರಮಾತ್ಮನು ಪ್ರತಿಯೊಬ್ಬರ ದೇಹದಲ್ಲೂ ನಾಲ್ಕು ರೂಪಗಳಿಂದ ಇರುವನು. ಈ ನಾಲ್ಕು ರೂಪಗಳಲ್ಲಿ ವೈಶ್ವಾನರ ರೂಪವು ನಮ್ಮ ಬಲಗಣ್ಣಿನಲ್ಲಿರುವುದು. ಜೀವಾತ್ಮನು ಬಲಗಣ್ಣಿನಲ್ಲಿ ಇರುವಾಗ ಜಾಗ್ರದವಸ್ಥೆಗೆ ಬರುವ ಕಾರಣ ಬಲಗಣ್ಣು 'ಜಾಗರಿತಸ್ಥಾನ' ಎಂದೇ ಎನಿಸಿದೆ. ಇಲ್ಲಿರುವ ವೈಶ್ವಾನರನು ಆನೆಯಮುಖದಂತೆ ಮುಖವುಳ್ಳವನು. ಜೀವಾತ್ಮರಿಗೆ ಅಗೋಚರನಾಗಿದ್ದು ಅವರಿಗೆ ಬಾಹ್ಯಪದಾರ್ಥಗಳ ಜ್ಞಾನವನ್ನುಂಟು ಮಾಡುವನು. ಇವನಿಗೆ ಮನುಷ್ಯಾಕಾರದ ಹದಿನೆಂಟು ಮುಖಗಳಿವೆ. ಅವುಗಳ ಮಧ್ಯದಲ್ಲಿರುವ ಮುಖ ಆನೆಯ ಮುಖದಂತಿದೆ. ಎರಡು ಪಾದಗಳು, ಒಂದು ಸೊಂಡಿಲು ಹಾಗೂ ನಾಲ್ಕು ಕೈಗಳೂ ಇವೆ. ಹೀಗೆ ಒಟ್ಟು ಏಳು ಅಂಗಗಳುಳ್ಳವನು ಈ ವೈಶ್ವಾನರ. ವಿಶ್ವವೆಂದರೆ ಎಲ್ಲರೂ ತಿಳಿಯುವ ಸ್ಥೂಲಪದಾರ್ಥಗಳು. ಸ್ಥೂಲವಾದ ಈ ಸತ್ಪದಾರ್ಥಗಳನ್ನು ಜೀವಾತ್ಮರ ಇಂದ್ರಿಯಗಳ ಮೂಲಕ ಭೋಗಿಸುವುದರಿಂದ ಭಗವಂತ 'ವೈಶ್ವ' ಎಂಬುದಾಗಿಯೂ ಜೀವಾತ್ಮರ ಶರೀರದಲ್ಲಿದ್ದರೂ ನಾಶ ಹೊಂದದ ಪ್ರಯುಕ್ತ 'ನರ' ಎಂಬುದಾಗಿಯೂ ಎನಿಸಿದ್ದು ಒಟ್ಟಾಗಿ ವೈಶ್ವಾನರ ಎಂದು ಕರೆಸಿಕೊಳ್ಳುವನು. ಈ ವೈಶ್ವಾನರ ಹಾಗೂ ತೈಜಸರೂಪನಾದ ಭಗವಂತನ ಧ್ಯಾನದಿಂದ ವಿನಾಯಕ ಗಜಾನನನೆನಿಸಿದನು. ವೈಶ್ವಾನರ, ತೈಜಸ ಹಾಗೂ ಪ್ರಾಜ್ಞ ಎಂಬ ಮೂರು ಭಗವದ್ರೂಪಗಳ ಧ್ಯಾನದಿಂದ ಇಂದ್ರನು ದೇವೇಂದ್ರ ಪದವಿಯನ್ನು ಪಡೆದನು. ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರೀಯ ಎಂಬ ನಾಲ್ಕು ರೂಪಗಳ ಧ್ಯಾನದಿಂದ ರುದ್ರನು*

*ರುದ್ರನೆನಿಸಿರುವನು. ಇಂಥಹ ನಾಲ್ಕು ರೂಪಗಳುಳ್ಳ ಶ್ರೀವಿಷ್ಣುವು ಸರ್ವೋತ್ತಮನು ಎಂದು ಮಹಾಯೋಗ ಎಂಬ ಗ್ರಂಥದಲ್ಲಿದೆ.*

ಖಂಡಾರ್ಥಃ

ಏವಂ ಸಮಸ್ತಪ್ರಣವಪ್ರತಿಪಾದ್ಯಮುಪಾಸನಾರ್ಥಂ ನಿರೂಪ್ಯೇದಾನೀಂ ತದೇಕದೇಶೈರಕಾರೋಕಾರಮಕಾರನಾದ್ಯೈಃ ಪ್ರತಿಪಾದ್ಯಾನಾಂ ವಿಶ್ವಾದಿಭಗವದ್ರೂಪಾಣಾಮುಪಾಸನಮಕಾರೋಕಾರಮಕಾರ ಇತ್ಯಾದಿನಾ ತೃತೀಯಖಂಡೇ ವಕ್ತುಂ ತಾನಿ ರೂಪ್ಯಾಣ್ಯಾಹ - ಸೋಽಯಮಿತಿ । ಸಃ ಸಮಸ್ತೋಂಪದವಾಚ್ಯೋಽಕ್ಷರನಾಮಾಽಯಂ ಶ್ರೀಬ್ರಹ್ಮಾದಿಷು ನಿಯಾಮಕತಯಾ ಸ್ಥಿತ ಆತ್ಮಾ ಚತುಷ್ಪಾತ್, ಚತ್ವಾರಃ ಪಾದಾಃ ಅಂಶಾಃ, ಸ್ವರೂಪಭೂತಾ ಯಸ್ಯ ಸ ಚತುಷ್ಪಾತ್ । ಪಾದಪದಸ್ಯ ಸಂಖ್ಯಾ ಸುಪೂರ್ವಸ್ಯೇತ್ಯಂತಲೋಪಃ । ಸರ್ವಜೀವನಿಯಾಮಕತಯಾ ತತ್ತದ್ದೇಹೇಷು ಚತೂರೂಪತಯಾ ತಿಷ್ಠತೀತ್ಯರ್ಥಃ । ಕಾನಿ ತೇಷಾಂ ಸ್ಥಾನಾನಿ, ಕಶ್ಚ ವ್ಯಾಪಾರಃ, ಕೀದೃಶಾನಿ ತಾನಿ ರೂಪಾಣಿ, ಕಿಂ ತೇಷಾಂ ಭೋಗ್ಯಂ, ಕಾನಿ ನಾಮಾನೀತ್ಯತಸ್ತತ್ಸರ್ವಂ ಕ್ರಮೇಣಾಹ - ಜಾಗರಿತೇತಿ । ಯತ್ರ ಸ್ಥಿತ್ವಾ ಜಾಗರ್ತಿ ತತ್ ಚಕ್ಷುರ್ಜಾಗರಿತಮ್ । ಅಧಿಕರಣೇ ಕ್ತಪ್ರತ್ಯಯಃ । ತದೇವ ಸ್ಥಾನಂ ಯಸ್ಯ ಸಃ ಜಾಗರಿತಸ್ಥಾನಃ ಚಕ್ಷುಸ್ಥಾನ ಇತ್ಯರ್ಥಃ । ಬಹಿಃಪ್ರಜ್ಞಃ । ಬಹಿರ್ಸ್ಥ್ಯೋ ಬಾಹ್ಯಾರ್ಥಪರಃ । ಬಹಿರ್ಬಾಹ್ಯಾರ್ಥಾನ್ ಪ್ರಜ್ಞಾಪಯತೀತಿ ಬಹಿಃ ಪ್ರಜ್ಞಃ । ಜಾನಾತೇರಂತರ್ಣೀತಣ್ಯರ್ಥಾದ್ 'ಇಗುಪಧಜ್ಞಾಪ್ರೀಕಿರಃ ಕ' ಇತಿ ಕಪ್ರತ್ಯಯಃ । ಆತೋ ಲೋಪ ಇಟಿಚೇತ್ಯಾಕಾರ ಲೋಪಃ ।

ಸಪ್ತಾಂಗಃ, ಚತ್ವಾರೋ ಹಸ್ತಾಃ ದ್ವೌ ಪಾದೌ ಗಜಮುಖತ್ವಾತ್ ಗಜಹಸ್ತ ಏಕ ಇತಿ ಸಪ್ತಾಂಗಃ । ಏಕೋನವಿಂಶತಿಮುಖಃ ನವೋತ್ತರದಶಮುಖಃ । ಮಧ್ಯಮಮುಖಂ ಗಜಮುಖಾಕಾರಂ, ಪಾರ್ಶ್ವದ್ವಯೇ ತು ನವ ನವ ಮುಖಾನಿ ಪುರುಷಮುಖಾಕಾರಾಣಿ ಇತಿ ವಿವೇಕಃ । ಸ್ಥೂಲಭುಕ್, ಸ್ಥೂಲಾನ್, ಶುಭಭೋಗಾನ್ ಭುಂಕ್ತ ಇತಿ ಸ್ಥೂಲಭುಕ್ । ವೈಶ್ವಾನರಃ ವಿಶ್ಯತೇ ಗಮ್ಯತೇ ಸರ್ವೈರ್ಜ್ಞಾಯತ ಇತಿ ವಿಶತೇಃ ಕರ್ಮಣಿ ವಪ್ರತ್ಯಯಃ । ಅನೇಕಾರ್ಥತ್ವಾತ್ ಧಾತುನಾಂ ವಿಶತಿರತ್ರ ಗತ್ಯರ್ಥಸ್ಸನ್ ಜ್ಞಾನಪರಃ । ವಿಶ್ವಂ ಸರ್ವೈರ್ಜ್ಞೇಯಂ ಸ್ಥೂಲಮ್ ವಸ್ತೂಚ್ಯತೇ । ಭೋಕ್ತೃತಯಾ ತತ್ಸಂಬಂಧೀ ವೈಶ್ವಃ । ನ ರೀಯತೇ ನ ಕ್ಷೀಯತೇ ಇತಿ ನರಃ । ರೀಙ್‌ಕ್ಷಯೇ । ಡಪ್ರತ್ಯಯಃ । ವೈಶ್ವಶ್ಚಾಸೌ ನರಶ್ಚ । ನರೇಚ ಸಂಜ್ಞಾಯಾಂ ಇತಿ ಸೂತ್ರೇಣ ಭಾಷ್ಯೋಕ್ತನಿರುಕ್ತಬಲಾದ್ವಾ ಧೀರ್ಘಃ ವೈಶ್ವಾನರಃ । ಪ್ರಥಮಃ ಪಾದಃ । ಆತ್ಮನ ಇತಿ ವಿಪರಿಣಾಮೇನಾತ್ರೋತ್ತರತ್ರ ಚಾನುಷಂಗಃ । ಸರ್ವದೇಹೇ- ಷ್ವಾದಾನಾದಿಕರ್ತೃತ್ವೇನ ಸ್ಥಿತಸ್ಯಾತ್ಮನಃ ಪ್ರಥಮಂ ರೂಪಮಿತ್ಯರ್ಥಃ ॥ ೩ ॥

ಅನುವಾದ - ಹೀಗೆ ಉಪಾಸನೆಗಾಗಿ ಸಮಸ್ತಪ್ರಣವ ಪ್ರತಿಪಾದ್ಯನಾದ ಶ್ರೀಹರಿಯನ್ನು ನಿರೂಪಿಸಿ, ಪ್ರಣವದ ಭಾಗಗಳಾದ ಅಕಾರ, ಉಕಾರ, ಮಕಾರ ನಾದಗಳಿಂದ ಪ್ರತಿಪಾದ್ಯರಾದ ವಿಶ್ವ, ತೈಜಸ, ಪ್ರಾಜ್ಞ ಹಾಗು ತುರೀಯರ ಉಪಾಸನೆಯನ್ನು ಮುಂದೆ ಮೂರನೇ ಖಂಡದಲ್ಲಿ ಹೇಳುವರು. ಈಗ ಮೊದಲು ಈ ನಾಲ್ವರ ರೂಪಗಳನ್ನು ಶ್ರುತಿಯು ಹೇಳುತ್ತದೆ—

ಸಮಸ್ತ ಓಂಕಾರವಾಚ್ಯನಾದ ಅಕ್ಷರನಾಮಕನಾದ ಶ್ರೀಬ್ರಹ್ಮಾದಿಗಳಲ್ಲಿ ನಿಯಾಮಕನಾಗಿರುವ ಈ ಆತ್ಮನು ತನ್ನ ಸ್ವರೂಪಭೂತವಾದ ನಾಲ್ಕು ಅಂಶಗಳುಳ್ಳವನು. ಆ ಜೀವರ ದೇಹದಲ್ಲಿ ಸಮಸ್ತ ಜೀವರ ನಿಯಾಮಕನಾಗಿ ನಾಲ್ಕು ರೂಪನಾಗಿರುವವನು ಎಂದೂ ಭಾವ. ಈ ರೂಪಗಳ ಸ್ಥಾನಗಳು ಅವುಗಳ ವ್ಯಾಪಾರ, ರೂಪಗಳು ಎಂತಹವು, ಮತ್ತು ಆ ರೂಪಗಳ ಭೋಗ್ಯ, ನಾಮಗಳನ್ನು ಕ್ರಮವಾಗಿ ಹೇಳುತ್ತದೆ— ವೈಶ್ವಾನರನು ಮೊದಲ ಅಂಶನು. ಯಾವ ಅವಸ್ಥೆಯಲ್ಲಿ ಜೀವನು ಜಾಗೃತನಾಗಿರುವನೋ ಅಂತಹ ಕಣ್ಣು ಜಾಗರಿತವೆನಿಸಿದೆ. ಇದು ವೈಶ್ವಾನರನಿಗೆ ಸ್ಥಾನ. ಬಾಹ್ಯ ಪದಾರ್ಥಗಳ ಜ್ಞಾನವನ್ನು ಜೀವನಿಗೆ ನೀಡುವವನು. ನಾಲ್ಕು ಕೈಗಳು, ಎರಡು ಕಾಲು, ಗಜಮುಖನಾದ ಕಾರಣ ಆನೆಗೆ ಹಸ್ತದಂತಿರುವ ಸೊಂಡಿಲೊಂದು ಹೀಗೆ ಸಪ್ತಾಂಗನು. ಹತ್ತೊಂಬತ್ತು ಮುಖಗಳು. ಈ ಮುಖಗಳಲ್ಲಿ ಮಧ್ಯದ ಮುಖ ಆನೆಯ ಮುಖ. ಎರಡೂ ಬದಿಗಳಲ್ಲಿ ಒಂಭತ್ತು, ಒಂಭತ್ತು ಪುರುಷನ ಮುಖಗಳು. ಸ್ಥೂಲಗಳಾದ ಶುಭಭೋಗಗಳನ್ನು ಇವನು ಭೋಗಿಸುವನು. ಎಲ್ಲ ದೇಹಗಳಲ್ಲಿ ಆದಾನಾದಿ-ಕರ್ತೃವಾಗಿರುವ ಆತ್ಮನ ಮೊದಲ ರೂಪ ಇದು.

ವಿವರಣೆ - ಚತುಷ್ಪಾತ್ ಎನ್ನುವಲ್ಲಿ ''ಸಂಖ್ಯಾ ಸುಪೂರ್ವಸ್ಯ''(೩-೧-೧೩೫) ಎನ್ನುವ ಸೂತ್ರದಿಂದ ಪಾದ ಶಬ್ದಲೋಪವಾಗಿದೆ.

ಬಹಿಃಪ್ರಜ್ಞಃ ಇಲ್ಲಿ ಅಂತರ್ಣೀತವಾದ ಣಿಜಂತವಾದ ಜ್ಞಾಧಾತುವಿಗೆ ''ಇಗುಪಧಜ್ಞಾಪ್ರೀಕಿರಃ ಕಃ'' ಎನ್ನುವ ಸೂತ್ರದಿಂದ ಕ ಪ್ರತ್ಯಯವಾಗಿ ''ಆತೋಲೋಪ ಇಟಿಚ'' ಎನ್ನುವ ಸೂತ್ರದಿಂದ ''ಜ್ಞಾ'' ಎನ್ನುವಲ್ಲಿಯ ಆಕಾರಲೋಪವಾಗಿದೆ.

ವೈಶ್ವಾನರ - ಎಲ್ಲರಿಂದ ತಿಳಿಯಲ್ಪಡುತ್ತದೆ ಎನ್ನುವ ಅರ್ಥದಲ್ಲಿ ವಿಶ್‌ಧಾತುವಿಗೆ ''ವ'' ಪ್ರತ್ಯಯ ಬಂದಿದೆ. ವಿಶ್‌ಧಾತುವನ್ನು ಪ್ರವೇಶ ಎನ್ನುವ

ಅರ್ಥದಲ್ಲಿ ಪಾಣಿನೀಯಾದಿಗಳು ಬಳಸಿರುವರು. ಆದರೆ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಪ್ರಕೃತದಲ್ಲಿ ಕೇವಲ ಗಮನ ಎನ್ನುವ ಅರ್ಥವಿಟ್ಟುಕೊಂಡು ಜ್ಞಾನ ಎನ್ನುವ ಅರ್ಥದಲ್ಲಿ ಪ್ರಯೋಗಿಸಿರುವರು. ''ವಿಶ್ವ''ಎಂದರೆ ಎಲ್ಲರೂ ತಿಳಿಯುವ ಸ್ಥೂಲ ಪದಾರ್ಥಗಳು. ಈ ಸ್ಥೂಲ ಪದಾರ್ಥದ ಭೋಕ್ತವಾದ್ದರಿಂದ ''ವೈಶ್ವ''ನೆನ್ನುವರು. ನಾಶ ಹೊಂದದಿರುವ ಕಾರಣ ನರನೆನ್ನುವರು ಒಟ್ಟಾಗಿ ವೈಶ್ವಾನರನೆನಿಸಿರುವನು. ''ನರೇಚ ಸಂಜ್ಞಾಯಾಮ್'' (೬-೩-೧೨೯) ಎನ್ನುವ ಸೂತ್ರದಿಂದ ವೈಶ್ವಾನರವೆಂದು ದೀರ್ಘವಾಗಿದೆ ॥ ೩ ॥

### ಉಪನಿಷತ್

### ಪರಮಾತ್ಮನ ತೈಜಸರೂಪ

**ಸ್ವಪ್ನಸ್ಥಾನೋಽಂತಃಪ್ರಜ್ಞಃ । ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ ೪ ॥**

### ಭಾಷ್ಯಂ

**ಜಾಗ್ರದ್ದರ್ಶನಸಂಸ್ಕಾರರೂಪತ್ವಾತ್ ಸ್ವಪ್ನಗಂ ತು ಯತ್ ।**
**ಪ್ರವಿವಿಕ್ತಂ ತು ತಜ್ಜ್ಞಾನಕಾರಣೋಽಂತರ್ಜ್ಞ ಉಚ್ಯತೇ ॥ ಇತಿ ವಾರಾಹೇ ।**

*ಅನುವಾದ — ಸ್ವಪ್ನಾವಸ್ಥೆಯಲ್ಲಿ ಕಾಣುವ ಪದಾರ್ಥಗಳು ಎಚ್ಚರಾವಸ್ಥೆಯಲ್ಲಿ ನಮಗೆ ಬರುವ ಅನುಭವದ ಸಂಸ್ಕಾರದಿಂದ ಉಂಟಾಗುತ್ತವೆ. ಆದ್ದರಿಂದಲೇ ಅವು ಎಚ್ಚರದಲ್ಲಿ ನಾವು ಕಾಣುವ ವಸ್ತುಗಳಿಗಿಂತ ಅತ್ಯಂತ ವಿಲಕ್ಷಣಗಳು. ಇಂಥಹ ಪದಾರ್ಥಗಳ ಜ್ಞಾನವನ್ನು ಜೀವಾತ್ಮನಿಗೆ ಉಂಟು-ಮಾಡುವುದರಿಂದಲೇ ತೈಜಸನು 'ಅಂತಃಪ್ರಜ್ಞ' ಎಂದು ಹೇಳಲ್ಪಡುವನು. ಹೀಗೆ ವಾರಾಹ ಪುರಾಣದಲ್ಲಿ ಹೇಳಿದೆ.*

### ಖಂಡಾರ್ಥಃ

ಸ್ವಪ್ನಸ್ಥಾನಃ । ಯತ್ರ ಸ್ಥಿತ್ವಾ ಜೀವಃ ಸ್ವಾಪ್ನಪದಾರ್ಥಾನ್ ಪಶ್ಯತಿ ಸ ಸ್ವಪ್ನಃ । ತದೇವ ಸ್ಥಾನಂ ಯಸ್ಯ ಸ ಸ್ವಪ್ನಸ್ಥಾನಃ, ಕಂಠದೇಶಸ್ಥ ಇತ್ಯರ್ಥಃ । ಅಂತಃಪ್ರಜ್ಞಃ ಅಂತಶ್ಶಬ್ದೋಽತ್ರ ಬಾಹ್ಯಾರ್ಥಜ್ಞಾನಜನ್ಯವಾಸನಾಪರಿಣಾಮರೂಪಾರ್ಥಪರಃ । ತಾನ್ ಅಂತಃಸ್ಥಿತಾನ್ ವಾಸನಾಮಯಾರ್ಥಾನ್ ಪ್ರಜ್ಞಾಪಯತಿ ಜಾನಾತಿ ಚೇತ್ಯಂತಃಪ್ರಜ್ಞಃ । ಪ್ರಜ್ಞ ಇತಿ ಜಾನಾತೇಃ ಕಃ । ಸಪ್ತಾಂಗ ಏಕೋನವಿಂಶತಿಮುಖ ಇತಿ ಪ್ರಾಗ್ವತ್ । ಪ್ರವಿವಿಕ್ತಭುಕ್ ।

ವಾಸನಾಮಯತಯಾ ಬಾಹ್ಯಾರ್ಥೇಭ್ಯೋ ವಿವಿಕ್ತಾನ್ ಸ್ವಾಪ್ನಾರ್ಥಾನ್ ಭುಂಕ್ತೇ ಭೋಜಯತಿ ಚೇತಿ ಪ್ರವಿವಿಕ್ತಭುಕ್ । ತೇಜೋಮಯಚಿತ್ತಸ್ಥತಯಾ ಚಿತ್ತಸಂಬಂಧಿತ್ವೇನ ತೈಜಸನಾಮಾ ಆತ್ಮನೋ ದ್ವಿತೀಯಃ ಪಾದಃ ದ್ವಿತೀಯಂ ರೂಪಮಿತ್ಯರ್ಥಃ ॥ ೪ ॥

*ಅನುವಾದ - ತೈಜಸನು ಎರಡನೆ ಅಂಶನು. ಜೀವನು ಯಾವ ಅವಸ್ಥೆ-ಯಲ್ಲಿದ್ದು ಸ್ವಾಪ್ನ ಪದಾರ್ಥಗಳನ್ನು ಕಾಣುವನೋ ಅದು ಸ್ವಪ್ನ ಅಂದರೆ ಕಂಠ. ಈ ಕಂಠದೇಶ ಇವನಿಗೆ ಸ್ಥಾನ. ಒಳಗೆ ತಿಳಿಸುವವನು ಬಾಹ್ಯ ಪದಾರ್ಥಗಳ ಅನುಭವದಿಂದ ಉಂಟಾಗುವ ಸಂಸ್ಕಾರದಿಂದ ಹುಟ್ಟುವ ಆಂತರಿಕ ಸ್ವಪ್ನಗಳನ್ನು ತಿಳಿಸುವನೆಂದು ಅಭಿಪ್ರಾಯ. ಬಾಹ್ಯಪದಾರ್ಥಗಳಿಂದ ವಿಲಕ್ಷಣವಾದ ಸ್ವಾಪ್ನವಸ್ತುಗಳನ್ನು ಜೀವನಿಗೆ ಭೋಗಮಾಡಿಸುವನು. ತಾನೂ ಅನುಭವಿಸುವನು. ತೇಜೋಮಯವಾದ ಚಿತ್ತದಲ್ಲಿರುವುದರಿಂದ ಈ ರೂಪಕ್ಕೆ ತೈಜಸ-ರೂಪವೆನ್ನುತ್ತಾರೆ ॥ ೪ ॥*

ಉಪನಿಷತ್

ಪರಮಾತ್ಮನ ಪ್ರಾಜ್ಞರೂಪ

ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಂ । ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ ೫ ॥

ಭಾಷ್ಯಂ

ಸುಷುಪ್ತಂ ತು ತಮೋ ಜ್ಞೇಯಂ ಹರಿಂ ಪ್ರಾಪ್ಯ ತದಾವೃತಃ ।
ನ ಕಾಮಯೇನ್ನೈವ ಪಶ್ಯೇಜ್ಜೀವಃ ಸ್ವಾತ್ಮತಮೋ ವಿನಾ ।
ಕಾಲಂ ಚ ತಸ್ಯ ಸ್ಥಾನಸ್ಯ ಪತಿಃ ಪ್ರಾಜ್ಞೋ ಹರಿಃ ಸ್ವಯಂ ।
ಚಿತ್ತಸ್ಥೋ ದರ್ಶಯೇದ್ ಯಸ್ಮಾತ್ ತೈಜಸಃ ಸ್ವಪ್ನಕೃದ್ಧರಿಃ ।
ನ ಬಾಹ್ಯಂ ಜ್ಞಾಪಯೇದ್ ಯಸ್ಮಾತ್ ಪ್ರಾಜ್ಞಸ್ತೇನ ಜನಾರ್ದನಃ ।
ಏಕೀಭಾವಂ ಪ್ರಜೇತಾಂ ಚ ತೇನ ವಿಶ್ವಶ್ಚ ತೈಜಸಃ ।
ಏಕೀಭೂತಸ್ತ್ವತಃ ಪ್ರಾಜ್ಞೋ ಘನೋ ಜೀವಸ್ತಮೋವೃತಃ ।
ತನ್ಮಾತ್ರಸ್ಯ ಸಕಾಲಸ್ಯ ಘನಪ್ರಜ್ಞಃ ಪ್ರದರ್ಶನಾತ್ ॥

ಇತಿ ಪ್ರಕಾಶಿಕಾಯಾಂ ।

ಆನಂದಮಯಃ ಪೂರ್ಣಾನಂದಃ । ಚೇತೋಮುಖಃ ಜ್ಞಾನಸ್ವರೂಪಮುಖಃ । ಪ್ರಜ್ಞಾನಘನ ಇತಿ ವಿಪರೀತಸಮಾಸಃ । ಘನಪ್ರಜ್ಞ ಇತಿ ವಕ್ಷ್ಯಮಾಣತ್ವಾತ್ । ವಿಷಯ- ಭೋಗಂ ವಿನಾ ಆನಂದಮಾತ್ರಭುಕ್ತ್ವಾದ್ ಆನಂದಭುಗಿತಿ ವಿಶೇಷಃ । ಆನಂದಮಯತ್ವಚೇತೋಮುಖತ್ವಸರ್ವಜ್ಞತ್ವಸರ್ವೇಶ್ವರತ್ವಾದಿ ಚತುಷ್ಟಯೇಽಪಿ ಸಮಮ್ । ಅನ್ಯತ್ರಾತಿದೇಶಾರ್ಥಂ ಏಕತ್ರ ಆನಂದಮಯತ್ವಂ ಚೇತೋಮುಖತ್ವಂ ಚ ಉಕ್ತಮ್ ।

*ಅನುವಾದ — ಸುಷುಪ್ತಿಯು ಅಜ್ಞಾನದಿಂದ ಉಂಟಾಗುವುದು. ಪ್ರಾಜ್ಞನಾಮಕ ಭಗವಂತನನ್ನು ಹೊಂದಿದ ಜೀವಾತ್ಮನು ಅಜ್ಞಾನಕಾರ್ಯವಾದ ಸುಷುಪ್ತಿಗೊಳಗಾಗಿ ಯಾವ ವಿಷಯಪದಾರ್ಥಗಳನ್ನೂ ಬಯಸುವುದಿಲ್ಲ. ಆದರೆ ತನ್ನ ಸ್ವರೂಪ, ಅಜ್ಞಾನ, ಕಾಲ, ಸುಷುಪ್ತ್ಯವಸ್ಥೆ, ಸುಷುಪ್ತಿಸುಖ ಈ ಎಲ್ಲವುಗಳ ಜ್ಞಾನ ಆವನಿಗಿರುತ್ತದೆ. ಸುಷುಪ್ತಿ ಸ್ಥಾನಕ್ಕೆ ಪ್ರಾಜ್ಞನಾಮಕ ಹರಿಯೇ ಒಡೆಯನು. ಶ್ರೀಹರಿಯು ಜೀವನ ಮನಸ್ಸಿನಲ್ಲಿದ್ದು ಸ್ವಾಪ್ನವಸ್ತುಗಳನ್ನು ಸೃಷ್ಟಿಸುವುದರಿಂದ ತೈಜಸ ಎನಿಸುವುದು. ನಿದ್ರಾವಸ್ಥೆಯಲ್ಲಿ ಬಾಹ್ಯಪದಾರ್ಥಗಳನ್ನಾಗಲೀ ಸ್ವಾಪ್ನ ಪದಾರ್ಥಗಳನ್ನಾಗಲೀ ತಿಳಿಯಗೊಡದ ಪ್ರಯುಕ್ತ ಪ್ರಾಜ್ಞ ಎನಿಸುವನು. ಸುಷುಪ್ತ್ಯವಸ್ಥೆಯಲ್ಲಿರುವ ವಿಶ್ವ ಮತ್ತು ತೈಜಸ ಭಗವದ್ರೂಪಗಳು ಪ್ರಾಜ್ಞನಲ್ಲಿ ಐಕ್ಯಗೊಳ್ಳುವವು. ಆದ್ದರಿಂದಲೇ ಆಗ ಪ್ರಾಜ್ಞನನ್ನು 'ಏಕೀಭೂತ' ಎನ್ನಲಾಗಿದೆ. ಅಜ್ಞಾನಾವೃತಜೀವನು 'ಘನ' ಎನಿಸಿರುವನು. ಕಾಲ, ಸುಪ್ತ್ಯವಸ್ಥೆ, ಸುಖ ಇವುಗಳಿಂದ ಕೂಡಿದ ಅಜ್ಞಾನಾವೃತನಾದ ಜೀವಾತ್ಮನನ್ನಷ್ಟೇ ತಿಳಿಸಿ-ಕೊಡುವುದರಿಂದ ಪ್ರಾಜ್ಞನು ಘನಪ್ರಜ್ಞ ಎನಿಸಿರುವನು ಎಂದು ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಹೇಳಿದೆ.*

*ಪ್ರಾಜ್ಞನಿಗೆ ಹೇಳಲಾದ 'ಆನಂದಮಯ' ಎಂಬ ವಿಶೇಷಣಕ್ಕೆ ಆನಂದ ಪೂರ್ಣನಾದವನೆಂದರ್ಥ. 'ಚೇತೋಮುಖಃ' ಎಂದರೆ ಜ್ಞಾನರೂಪವಾದ ಮುಖವುಳ್ಳವನೆಂದರ್ಥ. 'ಘನ' ಎನಿಸುವ ಜೀವಾತ್ಮನನ್ನು ತಿಳಿಸುವವನೆಂಬ ಅರ್ಥದಲ್ಲಿ 'ಘನಪ್ರಜ್ಞಾನ' ಎಂಬ ಶಬ್ದ ಉಚಿತ. ಆದರೂ ಉಪನಿಷತ್ತಿನಲ್ಲಿ ಪ್ರಜ್ಞಾನಘನ ಎಂದಿದೆ. ಸಮಾಸದಲ್ಲಿ ಪದಗಳು ಹಿಂದುಮುಂದಾಗಿರುವುದು ಇದಕ್ಕೆ ಕಾರಣ. ಮುಂದೆ ಇದೇ ಉಪನಿಷತ್ತಿನಲ್ಲಿ ಉದಾಹರಿಸಲಾಗುವ ಮಂತ್ರದಲ್ಲಿ 'ಪ್ರಜ್ಞಾನಘನಃ' ಎಂಬುದರ ಬದಲಾಗಿ 'ಘನಪ್ರಜ್ಞ' ಎಂದೇ ಹೇಳಲಾಗಿದೆ. ಇದರಿಂದ 'ಪ್ರಜ್ಞಾನಘನ' ಎಂಬುದು ಸಮಾಸದಲ್ಲಿ ಹಿಂದುಮುಂದಾಗಿ ಪ್ರಯೋಗಿಸಿದುದೆಂಬುದು ಸ್ಪಷ್ಟವಾಗುತ್ತದೆ.*

*ವಿಶ್ವ ಹಾಗೂ ತೈಜಸಭಗವದ್ರೂಪಗಳು ಬಾಹ್ಯ ಹಾಗೂ ಆಂತರಿಕ ಪದಾರ್ಥಗಳ ಭೋಗದಿಂದಾಗಿ ಆನಂದವುಳ್ಳವುಗಳಾದರೆ ಪ್ರಾಜ್ಞನು ವಿಷಯಭೋಗವಿಲ್ಲದೆಯೇ ಸ್ವರೂಪಾನಂದದ ಅನುಭವವುಳ್ಳವನಾದುದರಿಂದ ಅವನನ್ನು 'ಆನಂದಭುಕ್' ಎಂದು ವಿಶೇಷವಾಗಿ ಉಲ್ಲೇಖಿಸಲಾಗಿದೆ. ಪ್ರಾಜ್ಞನಿಗೆ ಹೇಳಿದ ಆನಂದಮಯತ್ವ, ಚೇತೋಮುಖತ್ವ, ಸರ್ವಜ್ಞತ್ವ ಹಾಗೂ ಸರ್ವೇಶ್ವರತ್ವಾದಿಗಳು ಪ್ರಾಜ್ಞನಲ್ಲಿ ಮಾತ್ರವಲ್ಲದೆ ವಿಶ್ವ, ತೈಜಸ, ಮತ್ತು ತುರ್ಯ ರೂಪಗಳಲ್ಲೂ ಇವೆ. ಇದನ್ನು ತಿಳಿಸುವುದಕ್ಕಾಗಿ ಪ್ರಾಜ್ಞರೂಪದ ಪ್ರಸ್ತಾವದಲ್ಲಿ ಅವುಗಳನ್ನು ಹೇಳಲಾಗಿದೆ ॥ ೫ ॥*

ಖಂಡಾರ್ಥಃ

ತೃತೀಯಪಾದಸ್ಯ ಸ್ಥಾನಂ ವಕ್ತುಂ ಸ್ಥಾನಸ್ವರೂಪಂ ತಾವದಾಹ - ಯತ್ರೇತಿ ।

ಯತ್ರ ದೇಶೇ ಸುಪ್ತಃ ಅಜ್ಞಾನಾವೃತಃ, ಸುಂ ಸುಖರೂಪಂ ಭಗವಂತಂ ಪ್ರಾಪ್ತ ಇತಿ ವಾ 'ಪ್ರಾಜ್ಞೇನಾತ್ಮನಾ ಸಂಪರಿಷಕ್ತ' ಇತ್ಯಾದೇಃ, ಕಂಚನ ಕಮಪಿ ಕಾಮಂ ಕಾಮ್ಯಮಾನಮರ್ಥಂ ನ ಕಾಮಯತೇ, ಕಂಚನ ಸ್ವಪ್ನಂ ಸ್ವಾಪ್ನಪದಾರ್ಥಂ ಚ ನ ಪಶ್ಯತಿ, ಉಪಲಕ್ಷಣಮೇತತ್, ಸ್ವಾತ್ಮಕಾಲಾಜ್ಞಾನಾನಿ ವಿನಾ ಕಿಮಪಿ ನ ಪಶ್ಯತೀತ್ಯರ್ಥಃ । ತತ್ ಸ್ಥಾನಂ ಸುಷುಪ್ತಮಿತ್ಯುಚ್ಯತೇ । ಸುಷುಪ್ತಮೇವ ಸ್ಥಾನಂ ಯಸ್ಯ ಸ ಸುಷುಪ್ತಸ್ಥಾನಃ, ಹೃತ್ಕರ್ಣಿಕಾಗ್ರಸ್ಥ ಇತಿ ಯಾವತ್ । ಏಕೀಭೂತಃ ವೈಶ್ವಾನರತೈಜಸಾಭ್ಯಾಂ ಸಂಶ್ಲೇಷವಿಶೇಷರೂಪೈಕೀಭಾವಂ ಪ್ರಾಪ್ತಃ । ಪ್ರಜ್ಞಾನಘನಃ, ಅವಿದ್ಯಾವೃತೋ ಜೀವೋ ಘನ ಇತ್ಯುಚ್ಯತೇ । ಸುಷುಪ್ತಿವೇಲಾಯಾಂ ಜೀವಸ್ವರೂಪಮಜ್ಞಾನಂ, ತದುಪಲಕ್ಷಿತಂ ಕಾಲಂ ಚೇತಿ ತ್ರಯಂ । ಪ್ರಜ್ಞಾಪಯತಿ ಜೀವಸ್ಯೇತಿ ಪ್ರಜ್ಞಾನಘನಃ । ಪ್ರಪೂರ್ವಾದಂತರ್ಣೀತಣ್ಯರ್ಥಾದ್ 'ಜ್ಞಾಅವಬೋಧನೇ' ಇತಿ ಧಾತೋಃ ಕೃತ್ಯಲ್ಯುಟೋ ಬಹುಲಮಿತಿ ಬಹುಲಗ್ರಹಣಾತ್ ಕರ್ಮಣಿ ಲ್ಯುಟಿ ಅನಾದೇಶೇ ಪ್ರಜ್ಞಾನಃ । ಪ್ರಜ್ಞಾಪಿತೋ ಘನೋ ಜೀವೋ ಯೇನ ಸಃ ಪ್ರಜ್ಞಾನಘನ ಇತಿ ವಿಗ್ರಹಃ । ಘನಪ್ರಜ್ಞ ಇತಿ ವಕ್ಷ್ಯಮಾಣತ್ವಾದಿಹಾಪಿ ಪ್ರಜ್ಞಾನಘನ ಇತ್ಯಸ್ಯ ಘನಪ್ರಜ್ಞಾನ ಇತಿ ವಿಪರೀತಸಮಾಸೋ ಧ್ಯೇಯಃ । ತಥಾತ್ವೇ ಅಂತರ್ಣೀತಣ್ಯರ್ಥಾತ್ ಕರ್ತರಿ ಲ್ಯುಟ್ । ಆನಂದಮಯಃ ಆನಂದಪ್ರಚುರಃ, ಪೂರ್ಣಾನಂದ ಇತಿ ಯಾವತ್ । 'ಯತೋವಾಚೋ ನಿವರ್ತಂತೇ' ಇತ್ಯಾದೌ ಪ್ರಸಿದ್ಧಮಿತಿ ಹೇರರ್ಥಃ । ಆನಂದಭುಕ್, ವಿಷಯಭೋಗಾನ್ ವಿನೈವಾನಂದಂ ಭುಂಕ್ತೇ ಭೋಜಯತಿ ಚೇತ್ಯಾನಂದಭುಕ್ । ಅತ್ರ ಸ್ಥೂಲಭುಕ್ತ್ವಂ ಪ್ರವಿವಿಕ್ತಭುಕ್ತ್ವಮಾನಂದಭುಕ್ತ್ವಂಚ ನಿತ್ಯಪೂರ್ಣಾನಂದಾನುಭವರೂಪಸ್ಯ ಕ್ರೀಡಾರೂಪಂ ಧ್ಯೇಯಮ್ । ಚೇತೋಮುಖಃ ಜ್ಞಾನಸ್ವರೂಪಮುಖಃ । ಮುಖ ಇತ್ಯುಪಲಕ್ಷಣಮ್ ।

ಜ್ಞಾನರೂಪಸರ್ವಾವಯವ ಇತ್ಯರ್ಥಃ । ಏತದಾನಂದಮಯತ್ವ ಚೇತೋಮುಖತ್ವ-ರೂಪವಿಶೇಷಣದ್ವಯಂ ಪ್ರಾಗುಕ್ತರೂಪದ್ವಯೇ ನಾಂತಃಪ್ರಜ್ಞಮಿತಿ ವಕ್ಷ್ಯಮಾಣಚತುರ್ಥ-ರೂಪೇಚ ಧ್ಯೇಯಂ । ಪ್ರಾಜ್ಞಃ ಪ್ರಕರ್ಷೇಣ ನ ಜ್ಞಾಪಯತೀತಿ ಪ್ರಾಜ್ಞಃ । ಜೀವಸ್ವರೂಪಕಾಲಾಜ್ಞಾನಾತಿರಿಕ್ತಂ ಬಾಹ್ಯಂ ಸ್ವಾಪ್ನಂ ವಾ ಕಿಮಪಿ ನ ಜ್ಞಾಪಯತೀತಿ ಪ್ರಾಜ್ಞನಾಮಕ ಇತ್ಯರ್ಥಃ । ಪ್ರಪೂರ್ವಾನ್ಣಿಜ್‌ಪಪದಾದಂತರ್ಣೀತಣ್ಯ-ರ್ಥಾದಾತಶ್ಚೋಪಸರ್ಗ ಇತಿ ಕಪ್ರತ್ಯಯಃ । ಆತ್ಮನಃ ತೃತೀಯಃ ಪಾದಃ, ತೃತೀಯಂ ರೂಪಮ್ ॥ ೫ ॥

*ಅನುವಾದ -ಪ್ರಾಜ್ಞನು ಮೂರನೇ ಅಂಶನು. ಯಾವ ಅವಸ್ಥೆಯಲ್ಲಿ ಜೀವನು ಅಜ್ಞಾನಾವೃತನಾಗಿ, 'ಇಂದ್ರಿಯಗಳು ಉಪರತವಾಗಿರುವುದರಿಂದ ಬಾಹ್ಯವಸ್ತು-ಗಳನ್ನಾಗಲಿ, ಸ್ವಾಪ್ನವಸ್ತುಗಳನ್ನಾಗಲಿ ಕಾಣುವುದಿಲ್ಲ ಮತ್ತು ಬಯಸುವುದಿಲ್ಲವೋ ಈ ಅವಸ್ಥೆಯು ಸುಷುಪ್ತ್ಯವಸ್ಥೆಯು. ಈ ಅವಸ್ಥೆಯಲ್ಲಿ ಜೀವನ ಸ್ಥಾನವಾದ ಹೃದಯಾಕಾಶವೇ ಇವನ ಸ್ಥಾನ. ಈ ಸಮಯದಲ್ಲಿ ಜೀವನು ತನ್ನ ಸ್ವರೂಪ, ಅಜ್ಞಾನಕಾಲ ಹಾಗೂ ಆ ಅವಸ್ಥೆಯಲ್ಲಾಗುವ ಸುಖ, ಇವುಗಳನ್ನು ಬಿಟ್ಟು ಬೇರೆ ಯಾವ ಅನುಭವವನ್ನು ಪಡೆಯುವುದಿಲ್ಲ. ಈ ಪ್ರಾಜ್ಞನು ವಿಶ್ವ ಹಾಗೂ ತೈಜಸರಿಂದ ಏಕೀಭಾವವನ್ನು ಹೊಂದಿರುವನು. ''ಘನ'' ಎಂದರೆ ಅವಿದ್ಯಾವೃತನಾದ ಜೀವನು. ಈ ಸುಪ್ತ್ಯವಸ್ಥೆಯಲ್ಲಿ ಜೀವನ ಸ್ವರೂಪ, ಅಜ್ಞಾನ, ಕಾಲ ಈ ಮೂರನ್ನು ಜೀವನಿಗೆ ತಿಳಿಸಿಕೊಡುವನು. ಪೂರ್ಣಾನಂದನೆನ್ನುವುದು ಶ್ರುತಿಸಿದ್ಧವೂ ಆಹುದು. ವಿಷಯ ಭೋಗವಿಲ್ಲದೇ ಆನಂದವನ್ನು ಅನುಭವಿಸುವನು. (ಆನಂದಭುಕ್) ಜೀವಾತ್ಮನೂ ಭೋಗಿಸುವಂತೆ ಮಾಡುವನು. ನಿತ್ಯಪೂರ್ಣನೂ ಆನಂದರೂಪನೂ ಆದ ಶ್ರೀಹರಿಯು ಸ್ಥೂಲಭೋಗವಾಗಲಿ, ಆನಂದಾನುಭವವಾಗಲಿ, ಅಥವಾ ಸ್ವಾಪ್ನವಸ್ತುಗಳ ಭೋಗವಾಗಲಿ ಕ್ರೀಡಾರೂಪವೆಂದು ತಿಳಿಯಬೇಕು. ಭಗವಂತನ ಮುಖ ಮತ್ತು ಉಳಿದ ಎಲ್ಲ ಅವಯವಗಳೂ ಕೂಡ ಜ್ಞಾನರೂಪವಾಗಿವೆ ॥ ೫ ॥*

ಉಪನಿಷತ್

ವಿಶ್ವಾದಿ ಚತೂರೂಪಗಳ ಮಹಿಮೆ

ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮೀ ।
ಏಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ॥ ೬ ॥

ಭಾಷ್ಯಂ

ಏಷ ಚತೂರೂಪ ಆತ್ಮಾ ಸರ್ವಜ್ಞ ಸರ್ವೇಶ್ವರತ್ವಾದಿಲಕ್ಷಣಃ ।
ಪರಮಾತ್ಮಾ ಚತೂರೂಪಃ ಸರ್ವಪ್ರಾಣಿಶರೀರಗಃ ।
ವಿಶ್ವಶ್ಚ ತೈಜಸಃ ಪ್ರಾಜ್ಞಸ್ತುರೀಯಶ್ಚೇತಿ ಕಥ್ಯತೇ ।
ತಾನಿ ರೂಪಾಣಿ ಸರ್ವಾಣಿ ಪೂರ್ಣಜ್ಞಾನಮಯಾನಿ ತು ।
ಚೇತೋಮುಖಾನಿ ಸರ್ವಾಣಿ ಪೂರ್ಣಾನಂದಸ್ವರೂಪತಃ ।
ಮುಖಶಬ್ದಸ್ತು ಸರ್ವಸ್ಯ ದೇಹಸ್ಯಾಪ್ಯುಪಲಕ್ಷಣಃ ।
ತಥಾಪಿ ಮುಖಶಬ್ದೋಽಯಂ ಪೂರ್ಣತ್ವಂ ಸೂಚಯೇದ್ವಿಭೋಃ ।
ಜ್ಞಾನಸ್ಯ ಮುಖ್ಯವಾಚಿತ್ವಾನ್ಮುಖವಾಚ್ಯಪಿ ಸನ್ ಸ್ವತಃ ।

ಇತಿ ಮಾರ್ಕಂಡೇಯೇ ।

ಪೂರ್ಣಾನಂದ ಸ್ವರೂಪಸ್ಯ ಕ್ರೀಡಾ ಭೋಗೋ ನ ಚಾನ್ಯಥಾ ।
ಯಥಾಽಽದಿತ್ಯಸ್ಯ ದೀಪೇನ ನ ವಿಶೇಷೋಽಸ್ತಿ ಕಶ್ಚನ ।

ಇತಿ ಬ್ರಹ್ಮತರ್ಕೇ ॥ ೬ ॥

*ಅನುವಾದ — ಉಪನಿಷತ್ತಿನ ಈ ಮಂತ್ರದಲ್ಲಿ 'ಏಷ' ಎಂಬ ಶಬ್ದದಿಂದ ವಿಶ್ವಾದಿ ನಾಲ್ಕುರೂಪಗಳನ್ನೂ ಇಟ್ಟುಕೊಳ್ಳಬೇಕು, ಕೇವಲ ಪ್ರಾಜ್ಞರೂಪವನ್ನಲ್ಲ. ಆದ್ದರಿಂದ ಇಲ್ಲಿ ಹೇಳಿದ ಸರ್ವೇಶ್ವರತ್ವ, ಸರ್ವಜ್ಞತ್ವ, ಅಂತರ್ಯಾಮಿತ್ವಾದಿ ಲಕ್ಷಣಗಳು ವಿಶ್ವಾದಿ ನಾಲ್ಕುರೂಪಗಳಿಗೂ ಅನ್ವಯಿಸುವವು. ಈ ವಿಶೇಷಣಗಳು ನಾಲ್ಕುರೂಪಗಳಿಗೆ ಇವೆಯೆಂದು ಮಾರ್ಕಂಡೇಯಪುರಾಣವೂ ದೃಢೀಕರಿಸುತ್ತದೆ —*

*ಪರಮಾತ್ಮನು ಸಕಲಪ್ರಾಣಿಗಳ ದೇಹಗಳಲ್ಲಿ ನಾಲ್ಕು ರೂಪಗಳಿಂದ ಇರುವನು. ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರ್ಯ ಎಂಬುದಾಗಿ ಈ ರೂಪಗಳು ಕರೆಸಿಕೊಳ್ಳಲ್ಪಡುವವು. ಈ ನಾಲ್ಕುರೂಪಗಳು ಪೂರ್ಣಾನಂದ ಸ್ವರೂಪಗಳು. ಪೂರ್ಣ ಜ್ಞಾನರೂಪವಾದವುಗಳು. ಆದರಿಂದಾಗಿಯೇ ಅವು ಚೇತೋಮುಖ ಎನಿಸುವುವು. ಚೇತೋಮುಖ ಪದದಲ್ಲಿ ಮುಖಶಬ್ದವು ಮುಖವನ್ನಷ್ಟೆ ಅಲ್ಲದೆ ಸಮಗ್ರ ಶರೀರವನ್ನೆ ಬೋಧಿಸುತ್ತಿದ್ದು ಸಮಗ್ರ ಶರೀರಕ್ಕೆ ಜ್ಞಾನಸ್ವರೂಪತ್ವವನ್ನು ಹೇಳುತ್ತಿದೆ. ಅಲ್ಲದೆ ಮುಖಶಬ್ದಕ್ಕೆ ಮುಖ್ಯ ಎಂಬ ಅರ್ಥವೂ ಇರುವುದರಿಂದ ಪರಮಾತ್ಮ ಸ್ವರೂಪ ಭೂತವಾದ ಜ್ಞಾನವು ಮುಖ್ಯ ಅಂದರೆ ಉತ್ತಮ, ಏಕೆಂದರೆ ಅದು ಪರಿಪೂರ್ಣವಾದುದು, ಎಂಬುದನ್ನೂ ಸೂಚಿಸುತ್ತದೆ'.*

*ಪ್ರಾಜ್ಞನಂತೆ ವಿಶ್ವ ಜಸರೂ ಪೂರ್ಣಾನಂದಸ್ವರೂಪಿಗಳಾಗಿದ್ದು ಆಂತರಿಕ ವಿಷಯಭೋಗವಿಲ್ಲದೆಯೇ ಆನಂದಿಸುವವರಾದರೂ ಹಿಂದೆ ಹೇಳಿದಂತೆ ವಿಷಯವನ್ನು ಭೋಗಿಸುವುದು ಕೇವಲ ಕ್ರೀಡೆಯೆ ಆಗಿದೆ. ಇದನ್ನು ಬ್ರಹ್ಮತರ್ಕ ವಿವರಿಸಿದೆ— 'ಪ್ರಕಾಶಮಯನಾದ ಸೂರ್ಯನಲ್ಲಿ ಇತರ ದೀಪಗಳಿಂದ ಹೆಚ್ಚಿನ ಪ್ರಕಾಶವು ಹೇಗೆ ಬರುವುದಿಲ್ಲವೋ ಹಾಗೇ ಪೂರ್ಣಾನಂದಸ್ವರೂಪಿಯಾದ ಭಗವಂತನಲ್ಲಿ ವಿಷಯ ಭೋಗದಿಂದ ಅದುವರೆಗೆ ಇಲ್ಲದ ಹೆಚ್ಚಿನ ಆನಂದವೇನೂ ಬರುವುದಿಲ್ಲ'.*

ಖಂಡಾರ್ಥ:

ಏವಂ ರೂಪತ್ರಯಂ ನಿರೂಪ್ಯ ಚತುರ್ಥಪಾದಂ ನಾಂತಃಪ್ರಜ್ಞಮಿತ್ಯಾದಿನಾ ನಿರೂಪಯಿಷ್ಯನ್ ವೈಶ್ವಾನರಾದಿರೂಪಾಣಾಮುಕ್ತಸ್ಥಾನವ್ಯಾಪಾರಾದ್ಯರ್ಥೇಷು ಶ್ಲೋಕಾನ್ ವಿವಕ್ಷುಃ ಮಧ್ಯೇ ವಕ್ಷ್ಯಮಾಣಚತುರ್ಥರೂಪೇಣ ಸಹ ಚತುರ್ಣಾಂ ರೂಪಾಣಾಂ ಮಹಿಮಾನಮಾಹ - ಏಷ ಇತಿ ।

ಏಷ ಉಕ್ತವಕ್ಷ್ಯಮಾಣಚತೂರೂಪ ಆತ್ಮಾ । ಏಷ ಇತ್ಯಭ್ಯಾಸಸ್ತಾತ್ಪರ್ಯಾರ್ಥಃ । ಅಂತರ್ಯಾಮೀ ಅಂತರ್ನಿಯಂತಾ । ಸರ್ವಸ್ಯ ಯೋನಿಃ ಕಾರಣಮಿತ್ಯಸ್ಯ ವಿವರಣಂ - ಪ್ರಭವಾಪ್ಯಯೌ ಹಿ ಭೂತಾನಾಮಿತಿ । ಹಿಯಸ್ಮಾತ್ ಪ್ರಭವಾಪ್ಯಯೌ, ಪ್ರಭವಾಪ್ಯಯಹೇತುರತ ಇತ್ಯರ್ಥಃ ।

***ಅನುವಾದ*** *— ಹೀಗೆ ಮೂರು ರೂಪಗಳನ್ನು ನಿರೂಪಿಸಿ, ಮುಂದೆ ನಾಲ್ಕನೆಯ ರೂಪವನ್ನು ಹೇಳಲಿಚ್ಛಿಸಿ ಹಿಂದೆ ಹೇಳಿದ ಮುಂದೆ ಹೇಳುವ ರೂಪಗಳ ಸ್ಥಾನ, ವ್ಯಾಪಾರಾದಿಗಳಲ್ಲಿ ಬ್ರಹ್ಮದೃಷ್ಟಶ್ಲೋಕಗಳನ್ನು ಹೇಳುತ್ತದೆ ಶ್ರುತಿ. ಈ ಮಧ್ಯದಲ್ಲಿ ನಾಲ್ಕೂ ರೂಪಗಳ ಮಹಿಮೆಯನ್ನು ಈ ಮಂತ್ರದಿಂದ ಹೇಳುತ್ತಾನೆ ವೇದಪುರುಷ- ಈ ಮೂರು ರೂಪಗಳಲ್ಲದೆ ಮುಂದೆ ಹೇಳುವ ಇನ್ನೊಂದು ರೂಪವೂ ಸೇರಿ ನಾಲ್ಕು ರೂಪಗಳುಳ್ಳ ಶ್ರೀಹರಿಯು ಎಲ್ಲರಿಗೂ ಒಡೆಯನು, ಎಲ್ಲವನ್ನೂ ಬಲ್ಲವನು, ಎಲ್ಲರಿಗೂ ಅಂತರ್ಯಾಮಿಯು. ಎಲ್ಲ ಜೀವಿಗಳ ಉತ್ಪತ್ತಿನಾಶಗಳಿಗೆ ಕಾರಣನಾಗಿರುವುದರಿಂದ ಸರ್ವಕಾರಣನೆನಿಸಿರುವವನು ॥೬॥*

ಉಪನಿಷತ್

ಬ್ರಹ್ಮ ಕಂಡ ಮಂತ್ರಗಳು

**ಅತ್ರೈತೇ ಶ್ಲೋಕಾ ಭವಂತಿ-**

**ಬಹಿಃಪ್ರಜ್ಞೋ ವಿಭುರ್ವಿಶ್ವೋ ಹ್ಯಂತಃಪ್ರಜ್ಞಸ್ತು ತೈಜಸಃ ।**

**ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾ ಸ್ಮೃತಃ ॥ ೭ ॥**

ಭಾಷ್ಯಂ

**ಪ್ರಮಾಣಸ್ಯ ಪ್ರಮಾಣಂ ಚ ಬಲವದ್ ವಿದ್ಯತೇ ಮುನೇ ।**
**ಬ್ರಹ್ಮದೃಷ್ಟಾನ್ ಯತೋ ಮಂತ್ರಾನ್ ಪ್ರಮಾಣಂ ಸಲಿಲೇಶ್ವರಃ ।**
**ಅತ್ರ ಶ್ಲೋಕಾ ಭವಂತೀತಿ ಚಕಾರೈವ ಪೃಥಕ್ ಪೃಥಕ್ ॥**

**ಇತಿ ಗಾರುಡೇ ।**

**ಖಂಡಚತುಷ್ಟಯೇಽಪಿ ಪೃಥಕ್ ಪೃಥಕ್ ॥ ೭ ॥**

***ಅನುವಾದ*** — *ಎಲೈ ಮುನಿಯೇ! ಒಂದು ಪ್ರಮಾಣಕ್ಕೆ ಸಂವಾದಿಯಾಗಿ ಮತ್ತೊಂದು ಪ್ರಮಾಣವು ಇದ್ದಲ್ಲಿ ಮೊದಲಿನ ಪ್ರಮಾಣವು ಪ್ರಬಲವಾಗುವುದು. ಆದ್ದರಿಂದಲೇ ವರುಣನು ತಾನು ಕಂಡ ಪ್ರಮೇಯಗಳಿಗೆ ಪ್ರಮಾಣಗಳನ್ನಾಗಿ ಚತುರ್ಮುಖನು ಕಂಡುಕೊಂಡಿದ್ದ ಮಂತ್ರಗಳನ್ನು ಪ್ರತ್ಯೇಕವಾಗಿ ಉದಾಹರಿಸುವನು — ಎಂದು ಗಾರುಡಪುರಾಣದಲ್ಲಿ ಹೇಳಿದೆ.*

*ಉಪನಿಷತ್ತಿನ ನಾಲ್ಕು ಖಂಡಗಳಲ್ಲೂ ಚತುರ್ಮುಖ ದೃಷ್ಟವಾದ ಮಂತ್ರಗಳನ್ನು ಉದಾಹರಿಸಲಾಗಿದೆ ಎಂಬುದನ್ನು ಗಾರುಡದ 'ಪೃಥಕ್ ಪೃಥಕ್' ಎಂಬ ಶಬ್ದಗಳು ತಿಳಿಸಿವೆ.*

ಖಂಡಾರ್ಥಃ

**ಉಪನಿಷತ್ ಸ್ವಯಂಪ್ರಮಾಣತ್ವೇಽಪಿ ದಾರ್ಢ್ಯಾಯ ಸ್ವೋಕ್ತಾರ್ಥೇ ಬ್ರಹ್ಮದೃಷ್ಟಾನ್ ಮಂತ್ರಾನುದಾಹರತಿ - ಅತ್ರೈತೇ ಶ್ಲೋಕಾ ಭವಂತೀತಿ । ಸಂವಾದಿನ ಇತಿ ಶೇಷಃ । ವೈಶ್ವಾನರೋ ಬಹಿಃಪ್ರಜ್ಞಃ । ತೈಜಸೋಽಂತಃಪ್ರಜ್ಞಃ ಪ್ರಾಜ್ಞಃ ಪ್ರಜ್ಞಾನಘನ ಇತ್ಯುಕ್ತಾರ್ಥೇ ಮಂತ್ರಮಾಹ - ಬಹಿರಿತಿ । ವಿಶ್ವೋ ವೈಶ್ವಾನರಃ । ಪದಾನಾಂ ಅರ್ಥಃ ಪೂರ್ವವದ್ ಧ್ಯೇಯಃ । ಸ್ಮೃತಃ ಇತಿ । ಮಂತ್ರದೃಷ್ಟಾ ಬ್ರಹ್ಮಣಾ ಸ್ಮೃತ ಇತ್ಯರ್ಥಃ ।**

***ಅನುವಾದ*** — *ಉಪನಿಷತ್ ಸ್ವಯಂ ತಾನೇ ಪ್ರಮಾಣವೆನಿಸಿದರೂ ತಾನು ಹೇಳಿದ ವಿಷಯದಲ್ಲಿ ಬ್ರಹ್ಮನು ಕಂಡ ಮಂತ್ರಗಳನ್ನು ಉದಾಹರಿಸುತ್ತದೆ. ಇದುವರೆಗೆ ತಿಳಿಸಿದ ಪ್ರಮೇಯಗಳ ವಿಷಯದಲ್ಲಿ ಬ್ರಹ್ಮದೃಷ್ಟವಾದ ಈ ಮಂತ್ರಗಳು ಸಂವಾದಿಯಾಗಿವೆ—*

*ಸರ್ವಶಕ್ತನಾದ ವೈಶ್ವಾನರನು ಜೀವರಿಗೆ ಬಾಹ್ಯಪದಾರ್ಥಗಳನ್ನು ತಿಳಿಯುವಂತೆ ಮಾಡುವನು. ತೈಜಸ ಒಳಗಿನ ವಾಸನಾಮಯ ಸ್ವಾಪ್ನಪದಾರ್ಥ-ಗಳನ್ನು ತಿಳಿಸುವನು. ಪ್ರಾಜ್ಞನು ಅಜ್ಞಾನಾವೃತನಾದ ಜೀವನಿಗೆ ಅವನ ಸ್ವರೂಪ,*

*ಅಜ್ಞಾನ ಕಾಲ— ಈ ಮೂರನ್ನು ತಿಳಿಸಿಕೊಡುವನು. ಹೀಗೇ ಒಬ್ಬನೇ ಭಗವಂತನು ಮೂರು ರೂಪಗಳಿಂದ ಇರುವನು ॥ ೭ ॥*

ಉಪನಿಷತ್

**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ ।**
**ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ ॥ ೮ ॥**

ಖಂಡಾರ್ಥ:

ಜಾಗರಿತಸ್ಥಾನಃ ಸ್ವಪ್ನಸ್ಥಾನಃ ಸುಷುಪ್ತಸ್ಥಾನಃ ಇತ್ಯುಕ್ತಾರ್ಥೇ ಮಂತ್ರಮಾಹ - ದಕ್ಷಿಣಾಕ್ಷೀತಿ

ಮುಖೇ ಅಗ್ರಭಾಗೇ । ಅಂತರಿತ್ಯಸ್ಯ ವಿವರಣಂ - ಮನಸೀತಿ । ಆಕಾಶೇ ಚ ಹೃದಿ ಹೃದಯಾಕಾಶೇ, ಹೃತ್ಕರ್ಣಿಕಾಗ್ರಸ್ಥಾಕಾಶ ಇತ್ಯರ್ಥಃ ॥

***ಅನುವಾದ*** *— ವೈಶ್ವಾನರನು ಬಲಗಣ್ಣಿನಅಗ್ರಭಾಗದಲ್ಲಿ, ತೈಜಸನು ಮನಸ್ಸಿನೊಳಗೆ ಪ್ರಾಜ್ಞನು ಹೃದಯಾಕಾಶದಲ್ಲಿ — ಹೀಗೆ ಭಗವಂತನು ಪ್ರತಿಯೊಬ್ಬನ ದೇಹದಲ್ಲೂ ಮೂರು ರೂಪಗಳಿಂದ ಇರುವನು ॥ ೮ ॥*

ಉಪನಿಷತ್

**ವಿಶ್ವೋ ಹಿ ಸ್ಥೂಲಭುಜ್ ನಿತ್ಯಂ ತೈಜಸಃ ಪ್ರವಿವಿಕ್ತಭುಕ್ ।**
**ಆನಂದಭುಕ್ ತಥಾ ಪ್ರಾಜ್ಞಸ್ತ್ರಿಧಾ ಭೋಗಂ ನಿಬೋಧತ ॥ ೯ ॥**

ಖಂಡಾರ್ಥ:

ಸ್ಥೂಲಭುಗಿತ್ಯಾದ್ಯುಕ್ತಾರ್ಥೇ ಮಂತ್ರಮಾಹ - ವಿಶ್ವೋಹೀತಿ । ನಿಬೋಧತೇತಿ ಮಂತ್ರದೃಷ್ಟಾ ಬ್ರಹ್ಮಣಾ ಸ್ವೋಪದೇಶ್ಯಾನ್ ಪ್ರತ್ಯುಚ್ಯತೇ । ಏವಂ ವಿಜಾನಥೇತ್ಯಪಿ ಧ್ಯೇಯಮ್ ।

***ಅನುವಾದ*** *— ವೈಶ್ವಾನರನು ಜೀವರು ಸ್ಥೂಲವಸ್ತುಗಳನ್ನು ಭೋಗಿಸುವಂತೆ ಮಾಡುವನು, ತಾನೂ ಭೋಗಿಸುವನು. ತೈಜಸನು ಸ್ವಾಪ್ನವಸ್ತುಗಳನ್ನು ಭೋಗಿಸುವಂತೆ ಮಾಡಿ ತಾನೂ ಭೋಗಿಸುವನು. ಪ್ರಾಜ್ಞನು ವಿಷಯಭೋಗವಿಲ್ಲದ ಸ್ವರೂಪಾನಂದವನ್ನು ಉಣಿಸಿ ತಾನೂ ಉಣ್ಣುವನು. ಹೀಗೆ ಮೂರು ವಿಧವಾಗಿ ಭೋಗಗಳಿವೆಯೆಂದು ತಿಳಿದುಕೊಳ್ಳಬೇಕು ॥ ೯ ॥*

*ವಿವರಣೆ - ಮಂತ್ರದ್ರಷ್ಟರನಾದ ಬ್ರಹ್ಮನು ''ನಿಬೋಧತ'' ಹೀಗೆ ತಿಳಿಯಿರಿ ಎಂದು ಶಿಷ್ಯರನ್ನು ಕುರಿತು ಹೇಳುತ್ತಾನೆ.*

ಉಪನಿಷತ್

**ಸ್ಥೂಲಂ ತರ್ಪಯತೇ ವಿಶ್ವಂ ಪ್ರವಿವಿಕ್ತಂ ಚ ತೈಜಸಂ ।**
**ಆನಂದಂ ಚ ತಥಾ ಪ್ರಾಜ್ಞಂ ತ್ರಿಧಾ ತೃಪ್ತಿಂ ವಿಜಾನಥ ॥ ೧೦ ॥**

ಖಂಡಾರ್ಥಃ

ಉಕ್ತ ವಿವಾರ್ಥೇ ಮಂತ್ರಾಂತರಂ ಪಠತಿ - ಸ್ಥೂಲಮಿತಿ । ಸ್ಥೂಲಂ ಭೋಗ್ಯಂ ವಸ್ತು ಕರ್ತೃ । ವಿಶ್ವಂ ಕರ್ಮ । ಏವಮಗ್ರೇಽಪಿ । ನಿತ್ಯತೃಪ್ತಸ್ಯ ಸ್ಥೂಲಾದಿನಾ ತೃಪ್ತಿಃ ಕ್ರೀಡಾರೂಪಾ ಧ್ಯೇಯಾ । ಆನಂದಮಾನಂದಃ ಲಿಂಗವ್ಯತ್ಯಯಾತ್ । ವಿಜಾನಥ । ವಿಜಾನೀಥ । ವಿಕರಣವ್ಯತ್ಯಯಾತ್ ।

*ಅನುವಾದ — ಸ್ಥೂಲವಾದಭೋಗವಸ್ತುವು ವಿಶ್ವನಾಮಕ ಹರಿಯನ್ನು ತೃಪ್ತಿಪಡಿಸುತ್ತದೆ. ಸ್ವಾಪ್ನವಸ್ತುವು ತೈಜಸ ನಾಮಕ ಹರಿಯನ್ನು ತೃಪ್ತಿಪಡಿಸುತ್ತದೆ. ಆನಂದವು ಪ್ರಾಜ್ಞನಾಮಕ ಹರಿಯನ್ನು ತೃಪ್ತಿ ಪಡಿಸುತ್ತದೆ. ಹೀಗೆ ಮೂರು ವಿಧವಾಗಿ ತೃಪ್ತಿಯನ್ನು ತಿಳಿಯಬೇಕು. ನಿತ್ಯತೃಪ್ತನಾದ ಶ್ರೀಹರಿಯೇ ಸ್ಥೂಲಪದಾರ್ಥಗಳ ಭೋಗವು ಕ್ರೀಡಾರೂಪವೆಂದು ತಿಳಿಯಬೇಕು ॥ ೧೦ ॥*

ಉಪನಿಷತ್

**ತ್ರಿಷು ಧಾಮಸು ಯದ್ ಭೋಜ್ಯಂ ಭೋಕ್ತಾ ಯಶ್ಚ ಪ್ರಕೀರ್ತಿತಃ ।**
**ವೇದೈತದುಭಯಂ ಯಸ್ತು ಸ ಭುಂಜಾನೋ ನ ಲಿಪ್ಯತೇ ॥ ೧೧ ॥**

ಖಂಡಾರ್ಥಃ

ವಿಶ್ವಾದಿರೂಪತ್ರಯಸ್ವರೂಪಂ ತತ್ ಸ್ಥಾನೇಷು ತದ್‌ಭೋಜ್ಯಸ್ವರೂಪಂ ಜಾನತಃ ಫಲಮಾಹ - ತ್ರಿಷ್ವಿತಿ । ತ್ರಿಷುಧಾಮಸು ಅಕ್ಷಿಮನೋಹೃದಯಾಕಾಶರೂಪೇಷು ಯದ್‌ಭೋಜ್ಯಂ ಸ್ಥೂಲಾದಿ, ಯಶ್ಚ ಭೋಕ್ತಾ ವಿಶ್ವಾದಿತ್ರಿರೂಪಾತ್ಮಾ ಏತದುಭಯಂ ಭೋಕ್ತೃ ಭೋಜ್ಯಲಕ್ಷಣಮುಭಯಂ ಯಸ್ತು ಯೋಧಿಕಾರೀ ವೇದ ಜಾನಾತಿ ಸ ಜ್ಞಾನೀ ವಿಷಯಾನ್ ಭುಂಜಾನಃ ಅನುಭವನ್ನಪಿ ತತ್‌ಕೃತಲೇಪಂ ನ ಪ್ರಾಪ್ನೋತಿ । ತತ್ಕೃತೋಚ್ಚತ್ವಾದಿವಿಕಾರಂ ನ ಪ್ರಾಪ್ನೋತೀತ್ಯರ್ಥಃ ।

*ಅನುವಾದ — ವಿಶ್ವ, ತೈಜಸ, ಪ್ರಾಜ್ಞ ರೂಪಗಳ ಸ್ವರೂಪ ಮತ್ತು ಭೋಗದ ಸ್ವರೂಪವನ್ನು ತಿಳಿದ ಅಧಿಕಾರಿಗೆ ಫಲ ಹೇಳುತ್ತದೆ- ಹೀಗೆ ಕಣ್ಣು ಮನಸ್ಸು ಹೃದಯಾಕಾಶವೆಂಬ ಮೂರು ಸ್ಥಾನಗಳಲ್ಲಿ ಭೋಗಿಸಲು ಯೋಗ್ಯವಾದವುಗಳನ್ನೂ, ಅವುಗಳ ಭೋಕ್ತೃಗಳಾದ ವಿಶ್ವಾದಿ ಭಗವದ್ರೂಪ-ಗಳನ್ನೂ ಬಲ್ಲ ಜ್ಞಾನಿಯು ವಿಷಯಪದಾರ್ಥಗಳನ್ನು ಭೋಗಿಸಿದರೂ, ಆ ಭೋಗಪ್ರಯುಕ್ತವಾದ ಉಚ್ಚತ್ವ-ನೀಚತ್ವಾದಿ ವಿಕಾರಗಳಿಗೆ ಗುರಿಯಾಗಲಾರನು.*

ಉಪನಿಷತ್

ಸೃಷ್ಟಿಯ ಸ್ವರೂಪ :

ಪ್ರಭವಃ ಸರ್ವಭೂತಾನಾಂ ಸತಾಮಿತಿ ವಿನಿಶ್ಚಯಃ ।
ಸರ್ವಂ ಜನಯತಿ ಪ್ರಾಣಶ್ಚೇತೋಽಂಶೂನ್ ಪುರುಷಃ ಪೃಥಕ್ ॥ ೧೨ ॥

ಭಾಷ್ಯಂ

ಪ್ರಭವಃ ಸರ್ವಭಾವಾನಾಂ ವಿಷ್ಣುರೇವ ನ ಸಂಶಯಃ ।
ಇತ್ಥಂ ಸತಾಂ ನಿಶ್ಚಯಃ ಸ್ಯಾದನ್ಯಥಾ ತ್ವಸತಾಂ ಭವೇತ್ ।
ಸರ್ವಸ್ಯ ಹಿ ಪ್ರಣೇತೃತ್ವಾತ್ ಪ್ರಾಣೋ ನಾರಾಯಣಃ ಪರಃ ॥

*ಅನುವಾದ — ಸಕಲ ಪದಾರ್ಥಗಳಿಗೂ ಶ್ರೀ ವಿಷ್ಣುವೇ ಸೃಷ್ಟಿಕರ್ತ-ನೆಂಬುದು ಸಜ್ಜನರ ಸಿದ್ಧಾಂತ. ಇದಕ್ಕೆ ವಿರುದ್ಧವಾದ ವಿಚಾರವು ದುರ್ಜನರದ್ದಾಗಿದೆ. ಎಲ್ಲರಿಗೂ ಪ್ರೇರಕನಾದುದರಿಂದ ನಾರಾಯಣನೇ ಪ್ರಾಣ ಎಂದೆನಿಸಿರುವನು ॥ ೧೨ ॥*

ಖಂಡಾರ್ಥಃ

ಏಷ ಯೋನಿಃ ಸರ್ವಸ್ಯೇತ್ಯುಕ್ತಾರ್ಥೇ ಮಂತ್ರಮಾಹ - ಪ್ರಭವ ಇತಿ ಪ್ರಭವತ್ಯುತ್ಪದ್ಯತೇಽನೇನೇತಿ ಪ್ರಭವಃ । ಸರ್ವಭಾವಾನಾಮಶೇಷವಸ್ತೂನಾಂ ಯಥಾ ಯೋಗಂ ಉತ್ಪತ್ತಿಹೇತುಶ್ಚಿತ್ತರೂಪ ಆತ್ಮೇತಿ ಯೋಜ್ಯಮ್ । ಇತಿ ಸತಾಂ ವಿನಿಶ್ಚಯ ಇತ್ಯುಕ್ತ್ಯಾಽಸತಾಮನ್ಯಥಾ ನಿಶ್ಚಯ ಇತಿ ಲಭ್ಯತೇ । ತದಗ್ರೇ ವಿವರಿಷ್ಯತಿ । ಸರ್ವಪ್ರಭವತ್ವಂ ವ್ಯನಕ್ತಿ - ಸರ್ವಂ ಜನಯತಿ ಪ್ರಾಣ ಇತಿ । ಸರ್ವಸ್ಯ ಪ್ರಣೇತೃತ್ವ ಹೇತುನಾ ಪ್ರಾಣನಾಮಾ । ಸರ್ವಂ ಜನಯತೀತ್ಯುಕ್ತ್ಯಾ ನ ಪರಿಣಾಮಿತ್ವಾದಿರೂಪಂ ಸರ್ವಪ್ರಭವತ್ವಮಿತ್ಯುಕ್ತಂ ಭವತಿ । ಪುರುಷಃ ಪೂರ್ಣಷಡ್ಗುಣತ್ವಾದಿನಾ ಪುರುಷನಾಮಾ ಪ್ರಾಗುಕ್ತ ಚತೂರೂಪಾತ್ಮಾ ಹರಿಃ ಚೇತೋಂಽಶೂನ್ ಜ್ಞಾನಾಖ್ಯರಶ್ಮಿಯುಕ್ತಾನ್, ಜೀವಾನಿತಿ ಯಾವತ್, ಪೃಥಗ್‌ದೇವ ದಾನವಮಾನವಾದಿಭೇದೇನ ಜನಯತೀತ್ಯರ್ಥಃ ॥

*ಅನುವಾದ — ವಿಶ್ವಾದಿ ನಾಲ್ಕು ರೂಪಗಳುಳ್ಳ ಶ್ರೀಹರಿಯು ಎಲ್ಲ ವಸ್ತುಗಳ ಸೃಷ್ಟಿಕರ್ತನೆಂಬುದು ಸಜ್ಜನರ ನಿಶ್ಚಿತ ಅಭಿಪ್ರಾಯವಾಗಿದೆ. ಗುಣಪೂರ್ಣನಾಗಿದ್ದು ಪುರುಷ ಎಂದೂ ಚೇಷ್ಟಕನಾಗಿದ್ದು ಪ್ರಾಣ ಎಂದೂ ಕರೆಸಿಕೊಳ್ಳುವ ಶ್ರೀಹರಿಯು ಸರ್ವವನ್ನು ಸೃಷ್ಟಿಸುವವನು. ಜ್ಞಾನರೂಪವಾದ ಕಿರಣಗಳಿಂದ ಕೂಡಿರುವ ಜೀವಾತ್ಮರನ್ನು ದೇವ, ದಾನವ, ಮನುಷ್ಯಾದಿ-ನಾನಾವಿಧದಿಂದ ಸೃಷ್ಟಿಸುವನು.*

ಉಪನಿಷತ್

**ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ।**
**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ ೧೩ ॥**

ಭಾಷ್ಯಂ

ತಾಂ ಸೃಷ್ಟಿಂ ಬಹುಧಾ ಪ್ರಾಹುಃ ಜ್ಞಾನಿನೋಽಜ್ಞಾನಿನಸ್ತಥಾ ।
ವಿಷ್ಣುರ್ವಿಕೃತಿಮಾಯಾತಿ ಮಹದಾದಿಸ್ವರೂಪಿಣೀಂ ।
ತತ್ತದ್ವಿವಿಧಭೂತಿಸ್ತು ಸೃಷ್ಟಿಃ ಪ್ರೋಕ್ತಾ ಹ್ಯಪಂಡಿತೈಃ ।
ಸ್ವಪ್ನಮಾಯಾಸರೂಪಾಂ ಚ ಕೇಚಿದಜ್ಞಾ ಜನಾ ವಿದುಃ ।
ಅವಿಕಾರಸ್ಯ ಚಿನ್ಮಾತ್ರಸ್ವೇಚ್ಛಯೈವಾಖಿಲಂ ಜಗತ್ ।
ಉತ್ಪದ್ಯತ ಇತಿ ಪ್ರಾಜ್ಞಾಃ ಪ್ರಾಹುರ್ಬ್ರಹ್ಮಾದಯೋಽಖಿಲಾಃ ।

*ಅನುವಾದ — ಪರಮಾತ್ಮನು ನಿರ್ವಹಿಸುತ್ತಿರುವ ಸೃಷ್ಟಿಕಾರ್ಯವನ್ನು ಜ್ಞಾನಿಗಳು ಹಾಗೂ ಅಜ್ಞಾನಿಗಳು ಬೇರೆ ಬೇರೆ ರೀತಿಯಾಗಿ ನಿರೂಪಿಸುವರು. ಭಗವಂತನು ಆಯಾ ಪದಾರ್ಥರೂಪದಿಂದ ಪರಿಣಾಮಗೊಳ್ಳುವುದೇ ಸೃಷ್ಟಿ ಎಂಬುದಾಗಿ ಬಾಸ್ಕರಾದಿಗಳು ಹೇಳುವರು. ಶ್ರೀವಿಷ್ಣು ಮಹದಾದಿ ತತ್ತ್ವರೂಪವಾಗಿ ಪರಿಣಮಿಸುವನೆಂದು ಅವರ ಪ್ರತಿಪಾದನೆಯಾಗಿದೆ. ಮತ್ತೆ ಕೆಲವು ಅಜ್ಞಾನಿಗಳು ಜಗತ್ಸೃಷ್ಟಿಯನ್ನು ಸ್ವಾಪ್ನ ಪದಾರ್ಥಗಳ ಸೃಷ್ಟಿಯಂತೆ ಐಂದ್ರಜಾಲಿಕ ಸೃಷ್ಟಿಯಂತೆ ಅತಾತ್ತ್ವಿಕವೆನ್ನುವರು. ಆದರೆ ಜ್ಞಾನಿಗಳಾದ ಬ್ರಹ್ಮಾದಿಗಳೆಲ್ಲರೂ ವಿಕಾರ ಶೂನ್ಯನಾದ ಶ್ರೀಹರಿಯ ಜ್ಞಾನಾತ್ಮಕವಾದ ಇಚ್ಛೆಯಿಂದಲೇ ಸಮಸ್ತ ಜಗತ್ತೂ ಉತ್ಪನ್ನವಾಗುವುದೆಂದು ಹೇಳುವರು.*

ಖಂಡಾರ್ಥಃ

ಸತಾಮಿತಿ ವಿನಿಶ್ಚಯ ಇತ್ಯತ್ರಾಽಸತಾಂ ವೈಪರೀತ್ಯೇನ ನಿಶ್ಚಯ ಇತ್ಯರ್ಥಾತ್ ಪ್ರಾಪ್ತಂ । ತದುಭಯಂ ವ್ಯನಕ್ತಿ - ವಿಭೂತಿಮಿತ್ಯಾದಿನಾ । ಸೃಷ್ಟಿಚಿಂತಕಾಃ ಸೃಷ್ಟಿವಿಷಯ ವಿಚಾರವಂತೋಽನ್ಯೇ ಬ್ರಹ್ಮಪರಿಣಾಮವಾದಿನೋಽಸಂತಃ ಪ್ರಸವಂ ಸೃಷ್ಟಿಂ ವಿಭೂತಿಂ ಜೀವಜಡಾತ್ಮನಾ ವಿವಿಧತಯಾ ಭವನಂ ಬ್ರಹ್ಮಣೋ ಮನ್ಯಂತೇ । ಸೃಷ್ಟಿಚಿಂತಕಾ ಇತ್ಯನೇನ ಯಥಾವದ್‌ಬ್ರಹ್ಮಸ್ವರೂಪಾನಭಿಜ್ಞಾ ಇತಿ ಸೂಚಿತಮ್ । ಅನ್ಯೈರ್ಬ್ರಹ್ಮವಿವರ್ತಃ ಪ್ರಪಂಚ ಇತಿ ವಾದಿಭಿಃ ಸೃಷ್ಟಿರ್ವಿಕಲ್ಪಿತಾ ವಿವಿಧತಯಾ ಕಲ್ಪಿತಾ । ಕಥಂ ? ಸ್ವಪ್ನಮಾಯಾ-ಸರೂಪೇತಿ। ಸ್ವಾಪ್ನಪದಾರ್ಥಃ ಸುಪ್ತಾತ್ಮವಿವರ್ತೋ ಯಥಾ ತತ್ಸರೂಪಾ ಬ್ರಹ್ಮವಿವರ್ತರೂಪಾ । ಮಾಯಾಸರೂಪಾ, ಮಾಯಾಪದೇನ ಮಾಯಾವಿನಿರ್ಮಿತ-ಗಂಧರ್ವನಗರಾದಿಗ್ರಹಃ । ತತ್ಸರೂಪಾ ಮಿಥ್ಯಾಭೂತೇತ್ಯೇವಂ ವಿಕಲ್ಪಿತೇತ್ಯರ್ಥಃ ॥೧೩॥

*ಅನುವಾದ* — *ಕೆಲವರು ಸೃಷ್ಟಿಯ ಬಗ್ಗೆ ವಿಚಾರ ನಡೆಸುತ್ತಾ, ಬ್ರಹ್ಮನು ಜೀವ ಜಡಾತ್ಮಕವಾದ ಈ ಪ್ರಪಂಚಾತ್ಮಕವಾಗಿ ಪರಿಣಾಮಗೊಳ್ಳುವುದೇ ಪ್ರಪಂಚದ ಸೃಷ್ಟಿ ಎಂದು ತಿಳಿಯುತ್ತಾರೆ. ಇನ್ನು ಕೆಲವರು ಸ್ವಾಪ್ನ ಪದಾರ್ಥಗಳಂತೆ, ಮಾಯಾನಿರ್ಮಿತ ವಸ್ತುಗಳಂತೆ ಮಿಥ್ಯಾ ಸೃಷ್ಟಿ ಎಂದೂ ನಾನಾ ವಿಧವಾಗಿ ಕಲ್ಪಿಸಿದ್ದಾರೆ.*

ಉಪನಿಷತ್

ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।
ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ॥ ೧೪ ॥

ಭಾಷ್ಯಂ

ಪೂರ್ಣಶಕ್ತೇಃ ಕುತೋ ಮಾಯಾ ಸಾರ್ವಜ್ಞ್ಯಾತ್ ಸ್ವಪ್ನವತ್ ಕುತಃ ।
ಸರ್ವದೋಷವ್ಯತೀತಸ್ಯ ವಿಕಾರಃ ಕುತ ಇಷ್ಯತೇ ।
ತಸ್ಮಾದೇವಾವಿಕಾರಸ್ಯ ವಿಷ್ಣೋರಿಚ್ಛಾವಶಾದಿದಂ ।
ಯಥಾರ್ಥಮೇವ ಸಂಭೂತಮಿತಿ ವೇದವಚೋಽಖಿಲಂ ।
ಕೇಚಿತ್ಕಾಲತ ಏವೈತಾಂ ಸೃಷ್ಟಿಮಾಹುರಕೋವಿದಾಃ ।
ಕೇಚಿದ್ರುದ್ರಾದ್ ಬ್ರಹ್ಮಣಶ್ಚ ಪ್ರಧಾನಾದಿತಿ ಚಾಪರೇ ।
ವಿಮೂಢಾಃ ಸರ್ವ ಏವೈತೇ ಯತೋ ನಾರಾಯಣಃ ಪರಃ ।
ಸರ್ವಕರ್ತಾ ಸರ್ವಶಕ್ತಿರೇಕ ಏವ ನ ಚಾಪರಃ ।
ಪ್ರಧಾನಕಾಲಬ್ರಹ್ಮೇಶಮುಖಾಃ ಸರ್ವೇಽಪಿ ತದ್ವಶಾಃ ॥ ೧೪ ॥

*ಅನುವಾದ — ಪೂರ್ಣಶಕ್ತಿಸಂಪನ್ನನಾದ ಭಗವಂತನನಿಗ ಮಾಯೆಯನ್ನು ಅವಲಂಬಿಸುವ ಅಗತ್ಯವಾದರೂ ಏನಿದೆ? ಸ್ವಪ್ನವು ಅಜ್ಞಾನದ ಕಾರ್ಯವಾಗಿದೆ. ಭಗವಂತ ಸರ್ವಜ್ಞ. ಅಂಥಹಾ ಭಗವಂತ ಜಗತ್ತನ್ನು ಸ್ವಪ್ನದಲ್ಲಿ ಕಾಣುತ್ತಿದ್ದಾನೆ ಎನ್ನುವುದಾದರೂ ಹೇಗೆ. ಸರ್ವದೋಷದೂರನಾದ ಭಗವಂತನಿಗೆ ಮಹತ್ತತ್ತ್ವಾದಿ ರೂಪವಾಗಿ ಪರಿಣಾಮವೂ ಕೂಡಲಾರದು. ಆದುದರಿಂದ ಅವಿಕಾರಿಯಾದ ಭಗವಂತನ ಇಚ್ಛೆಯಿಂದ ಸೃಷ್ಟವಾದ ಈ ಪ್ರಪಂಚ ಸತ್ಯವಾಗಿಯೇ ಇದೆ. ಇದನ್ನು ವೇದಗಳೆಲ್ಲ ಸಾರುತ್ತಿವೆ.*

*ಕೆಲವು ಅಜ್ಞಾನಿಗಳು ಕಾಲದಿಂದಲೇ ಜಗತ್ತಿನ ಸೃಷ್ಟಿಯಾಗುವುದು ಎನ್ನುವರು. ಮತ್ತೆ ಕೆಲವರು ರುದ್ರನಿಂದ ಸೃಷ್ಟಿಯಾಗುವುದೆಂದೂ, ಇನ್ನು ಕೆಲವರು ಚತುರ್ಮುಖನಿಂದ ಸೃಷ್ಟಿಯಾಗುವುದೆಂದೂ ಉಳಿದ ಕೆಲವರು ಜಡ ಪ್ರಕೃತಿಯಿಂದಲೇ ಸೃಷ್ಟಿಯಾಗುವುದೆಂದೂ ವಾದಿಸುವರು. ಇವರೆಲ್ಲರೂ ಮೂಢರು. ಯಾಕೆಂದರೆ ಸರ್ವೋತ್ತಮನಾದ ನಾರಾಯಣನೊಬ್ಬನೇ ಸರ್ವಸಮರ್ಥನಾಗಿದ್ದು ಸರ್ವಕರ್ತೃ ಎನಿಸಿರುವನು. ಪ್ರಕೃತಿ, ಕಾಲ, ಚತುರ್ಮುಖ, ರುದ್ರ ಮೊದಲಾದವರೆಲ್ಲರೂ ನಾರಾಯಣನ ಅಧೀನರು ॥೧೪॥*

ಖಂಡಾರ್ಥಃ

ಪರಿಣಾಮವಿವರ್ತಯೋರಭಾವೇ ಕಥಂ ಹರೇಃ ಸೃಷ್ಟಿರಿತ್ಯತಃ ಸತಾಂ ನಿಶ್ಚಯಪ್ರಕಾರಮಾಹ - ಇಚ್ಛೇತಿ । ಕೇವಲಮಿಚ್ಛಾ ಇಚ್ಛಾಮಾತ್ರಮ್ । ಅನಾಯಾಸೇನಾವಿಲಂಬೇನಾವಿಕಾರಿತ್ವೇನ ಚ ಪ್ರಭೋಃ ಪೂರ್ಣಶಕ್ತೇಃ ಸೃಷ್ಟಿಃ ಪ್ರಭುಕರ್ತೃಕಾ ವಿಶ್ವವಿಷಯಿಣೀ ಸೃಷ್ಟಿರಿತಿ ಸೃಷ್ಟೌ ಸೃಷ್ಟಿವಿಷಯೇ ವಿನಿಶ್ಚಿತಾ ವಿನಿಶ್ಚಯವಂತೋ ಬ್ರಹ್ಮಾದಯಃ ಸಂತ ಇತ್ಯರ್ಥಃ । ಕರ್ತರಿ ಕ್ತಃ । ಪ್ರಕರ್ಷೇಣ ಭವತಿ ಶಶ್ವದೇಕಪ್ರಕಾರೇಣ ವರ್ತತ ಇತಿ, ಪ್ರಭವತಿ ಸಮರ್ಥೋ ವರ್ತತ ಇತಿ, ಪ್ರಕರ್ಷೇಣ ಭವತ್ಯನುಭವತಿ ಅಖಿಲಮಿತಿ, ಪ್ರಭುಪದಸ್ಯ ವ್ಯುತ್ಪತ್ತಿತ್ರಯೇಣ ನಿರ್ವಿಕಾರತ್ವಪೂರ್ಣಶಕ್ತಿತ್ವ- ಸರ್ವಜ್ಞತ್ವರೂಪಾರ್ಥತ್ರಯಪರತ್ವಾತ್ ಪ್ರಭುಪದೇನೈವ ಪರಿಣಾಮವಾದಸ್ಯ ವಿವರ್ತವಾದಸ್ಯ ಮಾಯಾಸರೂಪತ್ವವಾದಸ್ಯ ಚ ನಿರಾಸೋ ಧ್ಯೇಯಃ । ಸತ್ಯಸೃಷ್ಟ್ಯಾವಶಕ್ತಸ್ಯೈವ ಮಾಯಿಕಸರ್ಜನಾತ್, ಸರ್ವಜ್ಞಸ್ಯಸೃಷ್ಟ್ಯಾಚ ಸ್ವಾಪ್ನಾರ್ಥಸರೂಪತ್ವಾಯೋಗಾದಿತಿ । ಪುನರ್ಮತಾಂತರಾಣ್ಯಾಹ - ಕಾಲಾದಿತಿ । ಕಾಲಚಿಂತಕಾಃ ಕಾಲಮೇವ ಪರಂ ಮನ್ವಾನಾಃ ಭೂತಾನಾಂ ಪ್ರಸೂತಿಮುತ್ಪತ್ತಿಂ ಕಾಲಾತ್ ಮನ್ಯಂತೇ । ಉಪಲಕ್ಷಣಮೇತತ್ । ವಿರಿಂಚಚಿಂತಕಾಃ ವಿರಿಂಚಾತ್, ರುದ್ರಚಿಂತಕಾಃ ರುದ್ರಾತ್ ಪ್ರಸೂತಿಂ ಮನ್ಯಂತ ಇತ್ಯೇವಂ ಮತಾಂತರಾಣ್ಯತ್ರ ಧ್ಯೇಯಾನಿ । ತೇಷಾಂ ನಿರಾಸಃ ಪ್ರಭುಪದೇನೈವ ಜ್ಞೇಯಃ ।

**ಹರೇರೇಕಸ್ಯೈವ ಪೂರ್ಣಶಕ್ತ್ಯಾದಿಮತ್ತ್ವೇನಾನ್ಯೇಷಾಂ ತದಭಾವಾದಿತಿ । ಅತ ಏವೇಚ್ಛಾಮಾತ್ರಮಿತ್ಯರ್ಥಸ್ಯ ಮಧ್ಯೇ ನಿವೇಶಃ ।**

*ಅನುವಾದ — ಭಗವಂತನ ಸೃಷ್ಟಿ ಪರಿಣಾಮ ವಿಕಾರ ಅಲ್ಲವೆಂದರೆ ಭಗವಂತನ ಸೃಷ್ಟಿ ಎಂತಹುದು? ಸಜ್ಜನರ ನಿಶ್ಚಿತ ಅಭಿಪ್ರಾಯ ಹೇಳುತ್ತದೆ. ಜಗತ್ತಿನ ಸೃಷ್ಟಿಯನ್ನು ಭಗವಂತನು ಇಚ್ಛಾಮಾತ್ರದಿಂದ ಅನಾಯಾಸವಾಗಿ ವಿಲಂಬವಿಲ್ಲದೆ ತಾನೂ ಯಾವ ವಿಕಾರ ಹೊಂದದೆ ಮಾಡುತ್ತಾನೆ ಎಂದು ಸಜ್ಜನರು ನಿಶ್ಚಿತವಾಗಿ ಅಭಿಪ್ರಾಯಪಡುತ್ತಾರೆ. ಕಾಲವೇ ಪರತತ್ವವೆಂದು ತಿಳಿದವರು ಸಕಲ ಜೀವಿಗಳೂ ಕಾಲದಿಂದಲೇ ಉತ್ಪನ್ನವಾಗುವವೆಂದು ಅಭಿಪ್ರಾಯಪಡುತ್ತಾರೆ. ಪ್ರಭೋಃ ಎನ್ನುವಲ್ಲಿ, ಪ್ರಕರ್ಷೇಣ ಭವತಿ ಶಶ್ವದೇಕಪ್ರಕಾರೇಣ ವರ್ತತೇ ಶಶ್ವದೇಕಪ್ರಕಾರನು; ಅರ್ಥಾತ್ ನಿರ್ವಿಕಾರನು, ಪ್ರಭವತಿ ಸಮರ್ಥೋ ಭವತಿ. ಪೂರ್ಣಶಕ್ತನು ಪ್ರಕರ್ಷೇಣ ಭವತಿ ಅನುಭವತ್ಯಖಿಲಂ ಎಲ್ಲವನ್ನೂ ತಿಳಿಯುವನು; ಸರ್ವಜ್ಞನು ಎಂದು ಹೀಗೆ ಮೂರು ತೆರನಾಗಿ ವ್ಯುತ್ಪತ್ತಿಯನ್ನು ಹೇಳಿ ನಿರ್ವಿಕಾರ, ಪೂರ್ಣಶಕ್ತ, ಸರ್ವಜ್ಞನೆಂದು ಅರ್ಥೈಸಿರುವರು. ಈ ರೀತಿ ಅರ್ಥ ಹೇಳುವ ಮೂಲಕವಾಗಿ ಇತರ ಮತಗಳನ್ನು ನಿರಾಸಮಾಡಿರುವರು. ಪರಿಣಾಮವಾದಿಗಳು ಭಗವಂತನೇ ಜಗದಾತ್ಮನಾ ವಿಕಾರಗೊಳ್ಳುತ್ತಾನೆ ಎನ್ನುವರು. ಇದು ಸರಿಯಾದುದಲ್ಲ. ಶ್ರೀಹರಿಗೆ ಯಾವ ವಿಕಾರವೂ ಇಲ್ಲ. ಅವನು ಶಶ್ವದೇಕಪ್ರಕಾರ ಎನ್ನುವ ಪ್ರಭು ಪದದಿಂದ ಸೂಚಿಸುವರು.*

*ಹಾಗೆಯೇ ವಿವರ್ತವಾದ, ಮತ್ತು ಮಾಯಿಕವಾದ ಮಿಥ್ಯಾಸೃಷ್ಟಿಯನ್ನು ಮಾಡುವನು ಎನ್ನುವುದನ್ನೂ "ಪ್ರಭು" ಪದದಿಂದಲೇ ನಿರಾಕರಿಸುವರು - ಸತ್ಯಸೃಷ್ಟಿಯನ್ನು ಮಾಡಲಶಕ್ತನಾದವನು. ಮಿಥ್ಯಾಸೃಷ್ಟಿ ಮಾಡುವನು. ಈ ಭಗವಂತನಾದರೂ ಸರ್ವಜ್ಞನಾದುದರಿಂದ ಸ್ವಪ್ನಪದಾರ್ಥಕ್ಕೆ ಸಮಾನವಾದ ಮಿಥ್ಯಾಸೃಷ್ಟಿಯನ್ನು ಮಾಡನೆಂಬುವುದನ್ನು ತಿಳಿಸಿರುವುದು. ವಿರಿಂಚ ಚಿಂತಕರು ಚತುರ್ಮುಖಬ್ರಹ್ಮ ಸೃಷ್ಟಿಕರ್ತೃವೆನ್ನುವರು. ರುದ್ರಚಿಂತಕರು ರುದ್ರ ಸೃಷ್ಟಿಸುವನೆನ್ನುವರು. ಇದರಂತೆಯೇ ಆಯಾ ದೇವಚಿಂತಕರು ಆಯಾ ದೇವತೆಯಿಂದ ಸೃಷ್ಟಿಯೆನ್ನುವರು. ಈ ಎಲ್ಲ ಅಸದ್ವಾದಗಳನ್ನು ನಿರಾಕರಿಸಲು ಶ್ರುತಿ ಪ್ರಭುವೆಂದಿದೆ. ಶ್ರೀಹರಿಯೊಬ್ಬನೇ ಪೂರ್ಣಶಕ್ತ, ಸರ್ವಜ್ಞ ಅವಿಕಾರಿ ಕಾರಣ ಇವನೇ ಜಗತ್ಸೃಷ್ಟಿಕರ್ತಾ. ಉಳಿದವರು ಪೂರ್ಣಶಕ್ತರಲ್ಲ. ಸರ್ವಜ್ಞರಲ್ಲ. ಅಂತೆಯೇ ಅವಿಕಾರಿಗಳೂ ಅಲ್ಲ. ಕಾರಣ ಇತರರ್‍ಯಾರು ಸೃಷ್ಟಿಕರ್ತೃಗಳಲ್ಲ ॥೧೪॥*

ಉಪನಿಷತ್

ಸೃಷ್ಟಿಯ ಪ್ರಯೋಜನ

**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ॥**

ಇತಿ ॥ ೧೫ ॥

ಭಾಷ್ಯಂ

ತಸ್ಯಾಪಿ ವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನೈಪುಣಾಃ ।
ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ ತು ವಿಪಶ್ಚಿತಃ ॥
ಸಾ ಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥

ಇತಿ ಹರಿವಂಶೇಷು ॥ ೧೫ ॥

ಇತಿ ಪ್ರಥಮಖಂಡಃ ।

*ಅನುವಾದ — ಬುದ್ಧಿ ಇಲ್ಲದ ಕೆಲವರು ಶ್ರೀವಿಷ್ಣುವೇ ಸೃಷ್ಟಿಯನ್ನು ಮಾಡುವನೆಂದೂ ಒಪ್ಪುವರಾದರೂ, ಅತೃಪ್ತನಾದ ಶ್ರೀಹರಿಯು ಭೋಗಕ್ಕಾಗಿ ಸೃಷ್ಟಿಯನ್ನು ನಡೆಸುವನು ಎನ್ನುವರು. ಇನ್ನೂ ಕೆಲವು ಅಜ್ಞಾನಿಗಳು ಭಗವಂತನು ಆಲಸ್ಯ ಪರಿಹಾರಕವಾದ ಕ್ರೀಡೆಗಾಗಿ ಸೃಷ್ಟಿಸುವನು ಎನ್ನುವರು. ಜ್ಞಾನಿಗಳ ಅಭಿಪ್ರಾಯದಲ್ಲಿ ಕ್ರೀಡೆ ಭಗವಂತನ ಸ್ವಭಾವವೆನಿಸಿದೆ. ಸರ್ವಸಮರ್ಥನಾಗಿದ್ದು ವಿಭು ಎನಿಸಿರುವ ಅವನಿಗೆ ಅತೃಪ್ತಿಯಿಂದಾಗಿ ಬಯಕೆ ಉಂಟಾಗುವುದಾದರೂ ಹೇಗೆ? ಎಂದು ಹರಿವಂಶದಲ್ಲಿದೆ.*

ಖಂಡಾರ್ಥಃ

ತರ್ಹಿ ಪೂರ್ಣಸ್ಯ ಸೃಷ್ಟಿಃ ಕಿಮರ್ಥೇತ್ಯತೋ ಲೋಕಾನುಗ್ರಹಾರ್ಥಂ ಸ್ವಭಾವ ಇತಿ ವಕ್ತುಂ ಮತಾಂತರಾಣ್ಯಾಹ - ಭೋಗಾರ್ಥಮಿತಿ । ಹರೇರತೃಪ್ತಸ್ಯೈವ ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಮನ್ಯಂತೇ । ಅಪರೇತು ಮಹಾರಾಜಸ್ಯ ಕಂದುಕಾದಾವಿವ ಕ್ರೀಡಾರ್ಥಂ ವಿಶ್ವಸೃಷ್ಟಿರಿತಿ ಮನ್ಯಂತ ಇತ್ಯರ್ಥಃ । ಸ್ವಮತಮಾಹ ಶ್ರುತಿಃ - ದೇವಸ್ಯೇತಿ । ದೇವಸ್ಯಾಯಂ ಸೃಷ್ಟ್ಯಾದಿವಿಷಯ ಏಷ ಇಚ್ಛಾ, ಇಚ್ಛಾಪೂರ್ವಕೋ ವ್ಯಾಪಾರ ಇತಿ ಯಾವತ್ । ಇಷು ಇಚ್ಛಾಯಾಂ ಘಞ್ । ಸ್ವಭಾವ ಏವ ನ ಪ್ರಯೋಜನಾಯ, ಕುತಃ ? ಆಪ್ತಕಾಮಸ್ಯ ಪೂರ್ಣಕಾಮಸ್ಯ ಹರೇಃ ಕಾ ಸ್ಪೃಹಾ ? ನ ಕಾಪೀತ್ಯರ್ಥಃ । ಇತಿಶಬ್ದೋ ರೂಪತ್ರಯನಿರೂಪಣಸಮಾಪ್ತೌ ॥ ೧೫ ॥

ಇತಿ ಪ್ರಥಮಃ ಖಂಡಃ ॥

***ಅನುವಾದ*** *— ಭಗವಂತ ಪೂರ್ಣನಾದರೆ ಸೃಷ್ಟಿ ಮಾಡುವುದೇಕೆ? ಲೋಕಾನುಗ್ರಹ ಶ್ರೀಹರಿಯ ಸ್ವಭಾವ ಎಂದು ಹೇಳಲು ಇತರ ಮತಗಳನ್ನು ಹೇಳುತ್ತದೆ — ಶ್ರೀಹರಿಯು ತನ್ನ ಆನಂದಕ್ಕಾಗಿ ಜಗತ್ತನ್ನು ಸೃಷ್ಟಿಸುವನೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಮಹಾರಾಜನು ಚೆಂಡಿನಿಂದ ಆಟವಾಡುವಂತೆ ತನ್ನ ಕ್ರೀಡೆಗಾಗಿ ಸೃಷ್ಟಿಸುವನೆಂದು ಅಭಿಪ್ರಾಯ ಪಡುವರು, ವಸ್ತುತಃ ಸ್ವೇಚ್ಛೆಯಿಂದ ಸೃಷ್ಟ್ಯಾದಿ ವ್ಯಾಪಾರವನ್ನು ಮಾಡುವುದು ಭಗವಂತನ ಸ್ವಭಾವ. ಹೊರತು ಯಾವುದೇ ಪ್ರಯೋಜನಕ್ಕಾಗಿ ಅಲ್ಲ. ಸದಾ ಸಂತೃಪ್ತನಾದ ಆತನಿಗೆ ಯಾವ ಪ್ರಯೋಜನದ ಬಯಕೆ ಇದ್ದೀತು? ಯಾವ ಬಯಕೆಯೂ ಅವನಿಗಿಲ್ಲ.*

# ಅಥ ದ್ವಿತೀಯಃ ಖಂಡಃ ॥

### ಉಪನಿಷತ್

### ಪರಮಾತ್ಮನ ತುರೀಯ ರೂಪ

**॥ ಹರಿಃ ಓಂ ॥ ನಾಂತಃಪ್ರಜ್ಞಂ ನಬಹಿಃಪ್ರಜ್ಞಂ ನೋಭಯತಃಪ್ರಜ್ಞಂ ನಪ್ರಜ್ಞಾನಘನಂ ನಪ್ರಜ್ಞಂ ನಾಪ್ರಜ್ಞಮದೃಷ್ಟಮವ್ಯವಹಾರ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೈಕಾತ್ಮ್ಯಪ್ರತ್ಯಯಸಾರಂ ಪ್ರಪಂಚೋಪಶಮಂ ಶಿವಮದ್ವೈತಂ ಚತುರ್ಥಂ ಮನ್ಯಂತೇ । ಸ ಆತ್ಮಾ ಸ ವಿಜ್ಞೇಯಃ ॥ ೧ ॥**

### ಭಾಷ್ಯಂ

ವಿಷ್ಣುಸ್ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ ।
ಮುಕ್ತಾನಾಂ ಪ್ರಾಪ್ಯರೂಪೋಽಸೌ ವ್ಯವಹಾರೇ ನ ದೃಶ್ಯತೇ ।
ಸಮ್ಯಕ್ ಸಮಾಹಿತಾನಾಂ ತು ಪ್ರಾಪ್ತಾನಾಂ ಷೋಡಶೀಂ ಕಲಾಂ ।
ಅಪರೋಕ್ಷದೃಶಾಂ ಕ್ವಾಪಿ ತುರೀಯಂ ದೃಶ್ಯತೇ ಪದಂ ।
ಅಂತರ್ಬಹಿಸ್ಥ ಸೌಪ್ತಂ ಚ ಸಮಾಧಿಜ್ಞಾನಮೇವ ಚ ॥
ಬಹಿಃಶಬ್ದಾದಿಕಂ ಜಾನನ್ ಪಶ್ಯನ್ ಸ್ವಪ್ನಂ ತಥೈವ ಚ ।
ಯದಾ ಭವತಿ ಸಾಽವಸ್ಥಾ ಹ್ಯುಭಯಜ್ಞಾನಶಬ್ದಿತಾ ॥
ಏತತ್ ಸರ್ವಂ ತುರೀಯೇಣ ರೂಪೇಣ ನ ಕರೋತ್ಯಜಃ ।
ಸರ್ವಜ್ಞಾನಪ್ರದಶ್ಚಾಪಿ ಮುಕ್ತಸ್ಯೈವ ತುರೀಯಕಃ ॥

ಇತಿ ಬ್ರಹ್ಮಾಂಡೇ ॥

*ಅನುವಾದ — ಮೂಗಿನ ಬುಡದಿಂದ ಹನ್ನೆರಡು ಅಂಗುಲಿಗಳಷ್ಟು ಮೇಲೆ ತಲೆಯ ಮಧ್ಯಭಾಗದಲ್ಲಿ ಶ್ರೀ ವಿಷ್ಣು ತನ್ನ ತುರೀಯ ರೂಪದಿಂದ ಇರುವನು. ಮುಕ್ತರಿಗೆ ಮಾತ್ರ ಪ್ರಾಪ್ಯನಾದ ಈ ತುರೀಯನು ಅಮುಕ್ತರಿಗೆ ಅಗೋಚರನು. ಆದರೂ ಶ್ರೀ ಹರಿಯನ್ನೆ ಧ್ಯಾನಿಸುತ್ತ ಹದಿನಾರನೆಯ ಕಲೆಯಾದ ಮುಖ್ಯಪ್ರಾಣನ ಪರಮಾನುಗ್ರಹಕ್ಕೆ ಪಾತ್ರರಾಗಿ ಅಪರೋಕ್ಷಜ್ಞಾನಿಗಳಾದ ಜೀವನ್ಮುಕ್ತರಿಗೂ ಕೆಲವೊಮ್ಮೆ ಕಾಣಸುವುದುಂಟು, ಪ್ರಾರಬ್ಧಕರ್ಮವು ಪ್ರತಿಬಂಧಕವಾದಾಗ ಅವರಿಗೂ ಕಾಣಸಲಾರದು. ಈ ರೂಪವು ಸ್ವಾಪ್ನಪದಾರ್ಥಗಳನ್ನಾಗಲಿ, ಬಾಹ್ಯ ಪದಾರ್ಥಗಳನ್ನಾಗಲಿ ಸುಪ್ತಜೀವರ ಸ್ವರೂಪಾದಿಗಳನ್ನಾಗಲೀ ತೋರಿಸುವುದಿಲ್ಲ. ಸಮಾಧಿಕಾಲದ ಜ್ಞಾನವನ್ನು ಉಂಟು ಮಾಡುವುದಿಲ್ಲ. ಬಾಹ್ಯ ಶಬ್ದಾದಿಗಳನ್ನು*

*ತಿಳಿಯುತ್ತಲೇ ಸ್ವಾಪ್ನವಸ್ತುಗಳನ್ನು ನೋಡುತ್ತಾ ಇರುವ ಅವಸ್ಥೆಯು ಉಭಯಜ್ಞಾನವೆನಿಸಿದ್ದು, ಇದನ್ನು ತುರೀಯರೂಪಿ ಭಗವಂತನು ಉಂಟು-ಮಾಡುವುದಿಲ್ಲ. ಆದರೆ ತುರೀಯನು ಮುಕ್ತರಿಗೆ ಸಕಲ ಪದಾರ್ಥಗಳ ಜ್ಞಾನವನ್ನು ನೀಡುವವನಾಗಿರುವನು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.*

ಭಾಷ್ಯಂ

ಅಮುಕ್ತಸ್ಯ ತ್ವದೃಶ್ಯತ್ವಾತ್ ಷೋಡಶೀಂ ವಾ ಕಲಾಮೃತೇ ।
ತುರೀಯೋಽದೃಷ್ಟ ಇತ್ಯುಕ್ತೋ ಗ್ರಹಣಾದೇರಗೋಚರಃ ।
ವಿನಾ ಮುಕ್ತಿಂ ತತಸ್ತೇನಾವ್ಯವಹಾರ್ಯ ಇತೀರಿತಃ ।
ಜಾಗ್ರದಾದಿಪ್ರವೃತ್ತಿಸ್ತು ಲಕ್ಷಣಂ ಹ್ಯನುಮಾಪಕಂ ।
ಅಲಕ್ಷಣಸ್ತದ್ರಾಹಿತ್ಯಾದಚಿಂತ್ಯಸ್ತತ ಏವ ಚ ।
ತತ ಏವ ಹ್ಯನಿರ್ದೇಶ್ಯಶ್ಚಿದಾನಂದೈಕಲಕ್ಷಣಃ ।
ಮುಕ್ತಸ್ಯ ಸರ್ವವ್ಯಾಪಾರಹೇತುರೇವ ತುರೀಯಕಃ ।
ಏಕಃ ಪ್ರಧಾನ ಉದ್ದಿಷ್ಟ ಆತ್ಮಾ ಪೂರ್ಣತ್ವತಃ ಶ್ರುತಃ ।
ತದೇವಾಸ್ಯ ಸ್ವರೂಪಂ ಯದ್ ಏಕಾತ್ಮ್ಯಂ ತೇನ ಕೀರ್ತಿತಃ ।
ಪ್ರತ್ಯಯೋ ಜ್ಞಾನರೂಪತ್ವಾತ್ ಸಾರ ಆನಂದರೂಪತಃ ।
ಉತ್ಕೃಷ್ಟಾನಂದರೂಪತ್ವಾದುಪಶಬ್ದಃ ಪ್ರಕೀರ್ತಿತಃ ।
ಪ್ರಪಂಚಂ ದೇಹಬಂಧಾಖ್ಯಂ ತುರೀಯಃ ಶಮಯೇದ್ ಯತಃ ॥
ಪ್ರಪಂಚೋಪಶಮಸ್ತೇನಾಪ್ಯುಕ್ತಃ ಸಃ ಭಗವಾನ್ ಪ್ರಭುಃ ।
ನಿರ್ದುಃಖಸುಖರೂಪತ್ವಾಚ್ಛಿವಶಬ್ದಃ ಶ್ರುತೌ ಶ್ರುತಃ ।
ಅನ್ಯಥಾಪ್ರತ್ಯಯೋ ದ್ವೈತಂ ಶಮಯೇತ್ ತಂ ಯತೋ ಹರಿಃ ॥
ಅದ್ವೈತಸ್ತೇನ ಚೋದ್ದಿಷ್ಟಸ್ತುರೀಯಃ ಪುರುಷೋತ್ತಮಃ ॥

ಇತಿ ಮಾಹಾತ್ಮ್ಯೇ ।

ಅಪೇಕ್ಷ್ಯ ವಸ್ತುಯಾಥಾರ್ಥ್ಯಂ ದ್ವಿತ್ವಮನ್ಯಸ್ವರೂಪತಾ ।
ಇಣ್ ಗತಾವಿತಿ ಧಾತೋಶ್ಚ ಯಜ್ಜ್ಞಾನಂ ದ್ವೈತಮುಚ್ಯತೇ ॥

ಇತಿ ಸಂಕಲ್ಪೇ ॥

*ಅನುವಾದ — ಮುಖ್ಯಪ್ರಾಣನ ಅನುಗ್ರಹವಿಲ್ಲದೆ ಅಮುಕ್ತರಿಗೆ ಅಪರೋಕ್ಷ ಜ್ಞಾನವಾಗದ ಪ್ರಯುಕ್ತ ಅವರಿಗೆ ಕಾಣಿಸಿಕೊಳ್ಳದ ತುರೀಯನು 'ಅದೃಷ್ಟ' ಎನಿಸಿರುವನು. ಮುಕ್ತಿಯಲ್ಲಿ ಹೊರತು ಸಂಸಾರಾವಸ್ಥೆಯಲ್ಲಿ ಉಪಾದಾನಾದಿ*

ವ್ಯವಹಾರಕ್ಕೆ ಅಗೋಚರನಾಗಿರುವುದರಿಂದ 'ಅವ್ಯವಹಾರ್ಯ' ಎನಿಸಿರುವನು. ಜಾಗ್ರದಾದಿ ಅವಸ್ಥಾ ಪ್ರೇರಕತ್ವವು ಭಗವಂತನ ಅಸ್ತಿತ್ವವನ್ನು ಅನುಮಾನ ಪ್ರಮಾಣದಿಂದ ಸಾಧಿಸಲು ಉಪಯುಕ್ತವಾಗಿರುವುದರಿಂದ 'ಲಕ್ಷಣ' ಎನಿಸಿದೆ. ತುರೀಯನಲ್ಲಿ ಇಂಥಹಾ ಲಕ್ಷಣ ಇಲ್ಲದಿರುವುದರಿಂದ ಅವನು 'ಅಲಕ್ಷಣ' ಎನಿಸಿರುವನು. ಆದರಿಂದಲೇ ಅವನು ಅಚಿಂತ್ಯ, ಅನಿರ್ದೇಶ್ಯ ಎನಿಸಿರುವನು. ಜ್ಞಾನಾನಂದಸ್ವರೂಪನಾದ ತುರೀಯನು ಮುಕ್ತರ ಸಕಲ ವ್ಯವಹಾರಗಳಿಗೂ ಕಾರಣನು.

ಏಕ ಎಂದರೆ ಪ್ರಧಾನ, ಸರ್ವೋತ್ತಮ. ಆತ್ಮ ಎಂದರೆ ಪೂರ್ಣ. ಸರ್ವೋತ್ತಮನೂ ಪೂರ್ಣನೂ ಆದ್ದರಿಂದ ತುರೀಯನು ಏಕಾತ್ಮ್ಯ ಎನಿಸುವನು. ಜ್ಞಾನರೂಪಿಯಾದುದರಿಂದ ಪ್ರತ್ಯಯನೆಂದೂ ಆನಂದರೂಪಿಯಾದ್ದರಿಂದ ಸಾರನೆಂದೂ ಕರೆಸಿಕೊಳ್ಳುವನು. ಹೀಗೆ ತುರೀಯನು 'ಏಕಾತ್ಮ್ಯ ಪ್ರತ್ಯಯಸಾರ'. ವ್ಯಾಪ್ತನಾದ್ದರಿಂದ ಪ್ರಪಂಚನೂ ಉತ್ತಮಾನಂದಸ್ವರೂಪನಾದ್ದರಿಂದ ಉಪಶಮನೂ ಆಗಿರುವನು. ಹೀಗೆ ಅವನು ಪ್ರಪಂಚೋಪಶಮ. ಅಥವಾ ಪ್ರಪಂಚ ಎಂದರೆ ದೇಹಬಂಧ. ಅದನ್ನು ಪರಿಹರಿಸುವುದರಿಂದ ತುರೀಯ 'ಪ್ರಪಂಚೋಪಶಮ'. ದುಃಖರಹಿತವಾದ ಸುಖಸ್ವರೂಪನಾದ್ದರಿಂದ ಶಿವನೆಂದು ಶ್ರುತಿಗಳಲ್ಲಿ ಕರೆಯಲ್ಪಟ್ಟಿದ್ದಾನೆ. ಅನ್ಯಥಾಜ್ಞಾನವೇ ದ್ವೈತ. ಅದನ್ನು ಪರಿಹರಿಸುವುದರಿಂದ ತುರೀಯ ಅದ್ವೈತನೆನಿಸಿದ್ದಾನೆ. ಎಂದು ಮಾಹಾತ್ಮ್ಯವೆಂಬ ಗ್ರಂಥದಲ್ಲಿ ಹೇಳಿದೆ.

ವಸ್ತುವಿನ ಯಥಾರ್ಥಸ್ವರೂಪಕ್ಕಿಂತ ವ್ಯತ್ಯಾಸವಾಗಿರುವುದು ದ್ವಿತ್ವವೆನಿಸಿದೆ. ಅರ್ಥಾತ್ ಅನ್ಯಥಾಭಾವ ದ್ವಿತ್ವ. ಇದನ್ನು ದ್ವೈತ ಎಂಬಲ್ಲಿ ದ್ವಿಶಬ್ದವು ಹೇಳುತ್ತದೆ. ಜ್ಞಾನಾರ್ಥಕವಾದ ಇಣ್ ಧಾತುವಿಗೆ ಕ್ತಪ್ರತ್ಯಯ ಬಂದು 'ಇತ' ಎಂಬ ಶಬ್ದವಾಗಿದೆ, ಅದಕ್ಕೆ ಜ್ಞಾನ ಎಂದರ್ಥ. ಹೀಗೆ ವಸ್ತುವನ್ನು ಅದರ ನಿಜಸ್ವರೂಪಕ್ಕಿಂತ ವ್ಯತ್ಯಾಸವಾಗಿ ತಿಳಿಯುವುದೇ 'ದ್ವೀತ. ದ್ವೀತವೇ ದ್ವೈತ. ದ್ವೀತಶಬ್ದಕ್ಕೆ ಸ್ವಾರ್ಥದಲ್ಲಿ ಅಣ್ ಪ್ರತ್ಯಯ ಬಂದರೆ ದ್ವೈತ ಎಂಬ ರೂಪವಾಗುವುದು. ಹೀಗೆ ಅನ್ಯಥಾಜ್ಞಾನಕ್ಕೆ ದ್ವೈತವೆಂದು ಹೆಸರು. ಹೀಗೆಂದು ಸಂಕಲ್ಪ ಎಂಬ ಗ್ರಂಥದಲ್ಲಿ ಹೇಳಿದೆ.

ಭಾಷ್ಯಂ

'ಸ ಆತ್ಮಾ ಸ ವಿಜ್ಞೇಯಃ' ಇತಿ 'ಸೋಽಯಮಾತ್ಮಾ ಚತುಷ್ಪಾದಿ'ತಿ ಚತುರ್ಥಾ ವಿಭಕ್ತ ಉಚ್ಯತೇ ಉಪಸಂಹಾರಾರ್ಥಂ । ''ಸೋಽಯಮಾತ್ಮಾಽಧ್ಯಕ್ಷರಮ್'' ಇತಿ ಪೃಥಗಾರಂಭಾತ್ ।

ವಿಶ್ವಾದಿರೂಪೋ ಯಸ್ತ್ವಾತ್ಮಾ ಸ ವಿಜ್ಞೇಯೋ ಮುಮುಕ್ಷುಭಿಃ ।
ನಿರ್ವಿಶೇಷೋಽಪಿ ಭಗವಾಂಸ್ತುರ್ಥಾ ಸಮುದೀರಿತಃ ।

ಇತಿ ಪ್ರತ್ಯಯೇ ॥ ೧ ॥

*ಅನುವಾದ — ಹಿಂದೆ 'ಸೋಽಯಮಾತ್ಮಾ ಚತುಷ್ಪಾತ್' ಎಂದು ಪ್ರಸ್ತಾಪಿಸಲ್ಪಟ್ಟ ವಿಶ್ವಾದಿ ನಾಲ್ಕು ಅಂಶಗಳುಳ್ಳ ಭಗವಂತನೇ 'ಸ ಆತ್ಮಾ ಸ ವಿಜ್ಞೇಯಃ' ಎಂದು ಇಲ್ಲಿ ವರ್ಣಿಸಲ್ಪಟ್ಟಿರುವನು. ಹೊರತು, ಕೇವಲ ತುರೀಯನಲ್ಲ. ಅಂದರೆ ಇಲ್ಲಿ 'ಸಃ' ಎಂದರೆ ಇಲ್ಲಿ ಹೇಳಿದ ತುರೀಯ ರೂಪ ಎಂದರ್ಥವಲ್ಲ. ಉಪನಿಷತ್ತಿನ ಆರಂಭದಲ್ಲಿ ಹೇಳಿದ ನಾಲ್ಕು ಅಂಶಗಳುಳ್ಳ ಆತ್ಮ ಎಂದರ್ಥ. ಇದನ್ನು ಈ ಪ್ರಕರಣದ ಉಪಸಂಹಾರಕ್ಕಾಗಿ ಹೇಳಲಾಗಿದೆ. ಮುಂದಿನ ಖಂಡದಲ್ಲಿ 'ಸೋಽಯಮಾತ್ಮಾ ಅಧ್ಯಕ್ಷರಂ' ಎಂದು ಬೇರೆಯೇ ಪ್ರಕರಣ ಆರಂಭವಾಗುವುದರಿಂದ ಈ ಪ್ರಕರಣ ಇಲ್ಲಿಗೆ ಮುಗಿಯಿತು ಎಂದು ತಿಳಿಯುತ್ತದೆ.*

*ವಿಶ್ವಾದಿ ನಾಲ್ಕು ರೂಪಗಳುಳ್ಳ ಶ್ರೀಹರಿಯು ಆತ್ಮನೆನಿಸಿದ್ದು ಮುಮುಕ್ಷುಗಳಿಂದ ವಿಶೇಷವಾಗಿ ತಿಳಿಯಲ್ಪಡಬೇಕಾದವನು. ಅವನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿದ್ದರೂ 'ವಿಶೇಷ'ದಿಂದ ನಾಲ್ಕು ರೂಪಗಳುಳ್ಳವನೆಂದು ಹೇಳಲ್ಪಟ್ಟಿರುವನು ಎಂದು ಪ್ರತ್ಯಯವೆಂಬ ಗ್ರಂಥ ಸಾರುತ್ತಿದೆ. ಆದ್ದರಿಂದ 'ಸ ಆತ್ಮಾ ಸ ವಿಜ್ಞೇಯಃ' ಎಂಬುದು ತುರೀಯನಿಗಷ್ಟೇ ಅಲ್ಲದೆ ವಿಶ್ವಾದಿ ನಾಲ್ಕು ರೂಪಗಳಿಗೂ ಅನ್ವಯಿಸುತ್ತದೆ ಎಂದು ತಿಳಿಯಬೇಕು ॥ ೧ ॥*

ಖಂಡಾರ್ಥಃ

ಚತುರ್ಥಪಾದಮಾತ್ಮನಃ ಆಹ - ನಾಂತಃಪ್ರಜ್ಞಮಿತಿ । ಅಂತಃ ಪ್ರಜ್ಞಾಪಯತೀತ್ಯಂತಃಪ್ರಜ್ಞಃ ಸ್ವಾಪ್ನಾರ್ಥಪ್ರದರ್ಶಕಃ, ಸ ನೇತ್ಯರ್ಥಃ । ನಬಹಿಃಪ್ರಜ್ಞಃ । ಜಾಗ್ರದರ್ಥಪ್ರದರ್ಶಕೋ ನ ಭವತಿ । ನೋಭಯತಃಪ್ರಜ್ಞಮ್ । ಬಾಹ್ಯಂ ಶಬ್ದಾದಿಕಂ ಜಾನನ್ ಸ್ವಾಪ್ನಾರ್ಥಾಂಶ್ಚ ಯದಾ ಪಶ್ಯತಿ ಸಾಽಪಿ ಕಾಚಿದ್ದಶಾ ಉಭಯತ ಇತ್ಯನೇನ ಗೃಹ್ಯತೇ । ಉಭಯತಃ ಬಾಹ್ಯಾಭ್ಯಂತರರೂಪಾರ್ಥಾನ್ ಪ್ರಜ್ಞಾಪಯತೀತ್ಯುಭಯತಃ ಪ್ರಜ್ಞಃ ಸ ನೇತಿ

ನೋಭಯತಃಪ್ರಜ್ಞಮ್ । ನ ಪ್ರಜ್ಞಾನಘನಮ್, ಪ್ರಾಗ್ವದ್ವಿಪರೀತಸಮಾಸಃ
ಘನಪ್ರಜ್ಞಾನಮಿತಿ । ಘನಮಜ್ಞಾನಾವೃತಂ ಸುಪ್ತಜೀವಸ್ವರೂಪಂ ತದಜ್ಞಾನಂ ವಾ ನ
ಪ್ರಜ್ಞಾಪಯತಿ ಪ್ರಾಜ್ಞವದಿತಿ ನಘನಪ್ರಜ್ಞಾನಮ್ । ನ ಘನಪ್ರಜ್ಞಾನಮೇವ
ನಪ್ರಜ್ಞಾನಘನಮ್ । ನಪ್ರಜ್ಞಂ, ಪ್ರಕರ್ಷೇಣ ಜ್ಞಾಪಯತಿ ಮಾನಸವಾಸನಾಮಯಂ
ಧ್ಯೇಯಂ ವಸ್ತ್ವಿತಿ ಪ್ರಜ್ಞಂ ತನ್ನ ಇತಿ ನಪ್ರಜ್ಞಮ್ । ವಿಶ್ವತೈಜಸಪ್ರಾಜ್ಞಾಖ್ಯ
ರೂಪತ್ರಯವ್ಯಾಪಾರಾನ್ ಬಾಹ್ಯಾಭ್ಯಂತರಪದಾರ್ಥಸ್ವರೂಪಜ್ಞಾಪನಸುಪ್ತಸ್ವರೂಪ-
ಜ್ಞಾಪನರೂಪಾನ್ ಕಿಂಚಿದ್ಬಾಹ್ಯಕಿಂಚಿತ್ಸ್ವಪ್ನೋಭಯಜ್ಞಾಪನರೂಪವ್ಯಾಪಾರಂ, ಸಮಾಧಿ-
ಸ್ಥಸ್ಯ ನಿರಂತರಜ್ಞಾನಸಂತತ್ಯುತ್ಪಾದನರೂಪವ್ಯಾಪಾರಂ ಚಾಕುರ್ವದಿತ್ಯರ್ಥಃ ।
ನೋಭಯತಃಪ್ರಜ್ಞಂ ನಪ್ರಜ್ಞಮಿತ್ಯತ್ರ ಕಿಂ ರೂಪಕರ್ತೃಕಂ ವ್ಯಾಪಾರದ್ವಯಮಸ್ಯ
ನೇತ್ಯುಚ್ಯತ ಇತಿ ವಿಚಾರಣೀಯಮ್ । ತರ್ಹಿ ಕಿಂ ನಿರ್ವ್ಯಾಪಾರಮೇವ ಚತುರ್ಥಂ
ರೂಪಮ್ ? ನೇತ್ಯಾಹ - ನಾಪ್ರಜ್ಞಮಿತಿ । ಅಪ್ರಜ್ಞಾಪಕಂ ನೇತಿ ನಾಪ್ರಜ್ಞಂ,
ಪ್ರಜ್ಞಾಪಕಮೇವ । ಮುಕ್ತಾನಾಂ ಸ್ವಸ್ವಯೋಗ್ಯಸರ್ವಜ್ಞಾನಪ್ರದಾನರೂಪವ್ಯಾಪಾರ-
ಕರ್ತೇತ್ಯರ್ಥಃ । ಅದೃಷ್ಟಂ, ವಿಶ್ವಾದಿರೂಪತ್ರಯಂ ಬಾಹ್ಯಾಭ್ಯಂತರಪದಾರ್ಥಜ್ಞಾಪನತದ್-
ವ್ಯವಹಾರರೂಪಕಾರ್ಯಲಿಂಗೇನಾನುಮೇಯಂ, ನ ತಥಾ ಚತುರ್ಥಂ ರೂಪಂ
ದೃಶ್ಯಮಿತ್ಯದೃಷ್ಟಮಿತಿ ವಾ ಅಮುಕ್ತದೃಷ್ಟ್ಯಗೋಚರತ್ವಾದ್ವಾ ಅದೃಷ್ಟಮಿತ್ಯರ್ಥಃ ।
ಅವ್ಯವಹಾರ್ಯಮಗ್ರಾಹ್ಯಮಿತಿ । ಮುಕ್ತಿಂ ವಿನಾ ತದ್ರೂಪವಿಷಯಕಗ್ರಹಣ-
ವ್ಯಾವಹಾರಯೋರಭಾವಾದವ್ಯವಹಾರ್ಯಮಗ್ರಾಹ್ಯ ಮಿತ್ಯುಚ್ಯತೇ । ಅಲಕ್ಷಣಂ
ಲಕ್ಷಣಮನುಮಾಪಕಂ, ಜಾಗ್ರದಾದಿಪ್ರವೃತ್ತಿರೂಪಾನುಮಾಪಕರಾಹಿತ್ಯಾದಲಕ್ಷಣಮ್ । ಅತ
ಏವಾಚಿಂತ್ಯಮ್ । ಅಚಿಂತ್ಯಶಕ್ತಿತ್ವಾದೇವಾವ್ಯಪದೇಶ್ಯಂ ವ್ಯಪದೇಷ್ಟುಮಶಕ್ಯಮ್ ।
ಏಕಾತ್ಮ್ಯಪ್ರತ್ಯಯಸಾರಂ, ಏಕಃ ಪ್ರಧಾನಃ । ಆತ್ಮಾ ಪೂರ್ಣಃ । ಏಕಶ್ಚಾಸಾವಾತ್ಮಾ ಚ
(ಪೂರ್ಣಶ್ಚ) ಏಕಾತ್ಮಾ । ಏಕಾತ್ಮೈವೈಕಾತ್ಮ್ಯಂ ಸ್ವಾರ್ಥೇಷ್ಯಞ್ಪ್ರತ್ಯಯಃ । ಪ್ರತ್ಯಯೋ
ಜ್ಞಾನರೂಪಃ, ಸಾರ ಆನಂದರೂಪ ಇತ್ಯೈಕಾತ್ಮ್ಯಪ್ರತ್ಯಯಸಾರಮ್ । ಪ್ರಪಂಚೋಪ-
ಶಮಂ, ಪಚಿವಿಸ್ತಾರೇ, ಪ್ರಪಂಚೋ ವಿಸ್ತೃತಃ, ವ್ಯಾಪ್ತ ಇತಿ ಯಾವತ್ । ಉಪಶಮಃ
ಉಪಶಬ್ದೋಽತ್ರೋತ್ಕೃಷ್ಟವಾಚೀ । ಶಮಃ ಸುಖಮ್ । ಉತ್ಕೃಷ್ಟಾನಂದರೂಪಮ್ ।
ಪ್ರಪಂಚಶ್ಚಾಸಾವುಪಶಮಶ್ಚ ಪ್ರಪಂಚೋಪಶಮಃ ತಮ್ । ಸಾರಮಿತ್ಯುಕ್ತ್ಯಾ
ಪ್ರತೀತಜೀವಸಾಮ್ಯನಿರಾಸಾಯೋಪಶಮಮಿತ್ಯುಕ್ತಿಃ । ಯದ್ವಾ ದೇಹಸಂಬಂಧಾ-
ದ್ಯನಿಷ್ಟಪ್ರಪಂಚಂ ಉಪಶಮಯತಿ ನಿವರ್ತಯತೀತಿ ಪ್ರಪಂಚೋಪಶಮಮಿತಿ ।
ನಿರ್ದುಃಖಸುಖರೂಪತ್ವಾಚ್ಛಿವಮ್ । ಅದ್ವೈತಂ, ದ್ವೀತಿ ಭಾವಪ್ರಧಾನಂ, ದ್ವಿತ್ವೇನ
ವಸ್ತುತತ್ವಾಪೇಕ್ಷಯಾಽನ್ಯಾತ್ಮಕತ್ವಾದಿರೂಪದ್ವಿತೀಯೇನ ಪ್ರಕಾರೇಣೇತಮ್, ಇಣ್ ಗತೌ,
ಜ್ಞಾತಂ ವಸ್ತು ದ್ವೀತಮ್ । ದ್ವೀತಸ್ಯೇದಂ ದ್ವೈತಂ ಮಿಥ್ಯಾಜ್ಞಾನಮ್ । ನ ವಿದ್ಯತೇ ದ್ವೈತಂ
ಮಿಥ್ಯಾಜ್ಞಾನಂ ಯಸ್ಮಾತ್ ತದದ್ವೈತಂ ಅಹಂಮಮತಾದಿಮಿಥ್ಯಾಧ್ಯವಸಾಯ-

**ನಿವರ್ತಕಮ್ । ಏತಾದೃಶಮಾತ್ಮನಃ ಚತುರ್ಥಪಾದಂ ಮನ್ಯಂತೇ ಬ್ರಹ್ಮಾದಯ ಇತ್ಯರ್ಥಃ । ಏತಸ್ಯ ಸ್ಥಾನಂ ತು 'ವಿಷ್ಣುಸ್ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ' ಇತಿ ಭಾಷ್ಯದಿಶಾ ಧ್ಯೇಯಮ್ । ಸೋಽಯಮಾತ್ಮಾ ಚತುಷ್ಪಾದಿತಿ ಪ್ರತಿಜ್ಞಾತಂ ವಿಶ್ವತೈಜಸ-ಪ್ರಾಜ್ಞತುರೀಯಾಖ್ಯರೂಪಚತುಷ್ಟಯಂ ಸಪರಿಕರಂ ನಿರೂಪ್ಯ ರೂಪತ್ರಯವಿಷಯೇ ಮಂತ್ರಾನುದಾಹೃತ್ಯ ಚತುರ್ಥವಿಷಯೇ ಮಂತ್ರಾನುದಾಹರಿಷ್ಯನ್ನಿದಾನೀಂ ಚತೂರೂಪ ಆತ್ಮಾಽವಶ್ಯಂ ಜ್ಞಾತವ್ಯ ಇತಿ ವದನ್ನುಪಸಂಹರತಿ - ಸ ಆತ್ಮೇತಿ । ಯ ಇತಿ ಶೇಷಃ । ಸ ಚತೂರೂಪೋ ಯ ಆತ್ಮಾ ಸ ವಿಜ್ಞೇಯಃ ವಿವಿಧತಯಾ ವಿಶೇಷೇಣ ಮುಮುಕ್ಷುಭಿರ್ಜ್ಞೇಯ ಇತಿ ॥ ೧ ॥**

*ಅನುವಾದ - ಮೊದಲನೆಯ ಖಂಡದಲ್ಲಿ ಜಾಗ್ರದವಸ್ಥಾನಿಯಾಮಕ ವಿಶ್ವ, ಸ್ವಪ್ನಾವಸ್ಥಾನಿಯಾಮಕ ತೈಜಸ, ಸುಷುಪ್ತಿ ಅವಸ್ಥಾನಿಯಾಮಕ ಪ್ರಾಜ್ಞರೂಪಗಳನ್ನು ವಿವರಿಸಿ, ಶ್ರುತಿಯು ಈ ದ್ವಿತೀಯ ಖಂಡದಲ್ಲಿ ಮುಕ್ತಿದಶೆಯಲ್ಲಿ ನಿಯಾಮಕನಾದ ಪರಮಾತ್ಮನ ತುರೀಯ ರೂಪವನ್ನು ಉಪದೇಶಿಸುತ್ತದೆ.*

*ಕಣ್ಣು, ಕಂಠದೇಶ ಮತ್ತು ಹೃತ್ಕರ್ಣಿಕಾಗ್ರಸ್ಥಾನಗಳು ವಿಶ್ವ-ತೈಜಸ-ಪ್ರಾಜ್ಞರಿಗೆ ಸ್ಥಾನಗಳಾಗಿದ್ದಂತೆ ನಾಸಿಕಾಮೂಲದಿಂದ ಹನ್ನೆರಡು ಅಂಗುಲಗಳ ಮೇಲೆ ಮಸ್ತಕದ ಮಧ್ಯದ ಸ್ಥಾನವು ಪರಮಾತ್ಮನ ತುರೀಯರೂಪದ ಸ್ಥಾನವು. ಈ ತುರೀಯ ರೂಪವು ತೈಜಸನಂತೆ ಆಂತರ, ವಾಸನಾಮಯ, ಸ್ವಾಪ್ನ ಪದಾರ್ಥಗಳ ಜ್ಞಾನವನ್ನು ಮಾಡಿಕೊಡುವುದಿಲ್ಲ. ವಿಶ್ವನ ಹಾಗೆ ಬಾಹ್ಯಪದಾರ್ಥಗಳ ಜ್ಞಾನವನ್ನು ಮಾಡಿಕೊಡುವುದಿಲ್ಲ. ಈ ಎರಡನ್ನೂ ತಿಳಿಸಿಕೊಡುವ ಇನ್ನೊಂದು ಅವಸ್ಥೆಯಿದೆ. ಅಂತಹ ಜ್ಞಾನವನ್ನು ಅಂದರೆ ಉಭಯತಃಪ್ರಜ್ಞೆಯನ್ನು ತುರೀಯರೂಪವು ಮಾಡಿಕೊಡುವುದಿಲ್ಲ. ಈ ಉಭಯತಃಪ್ರಜ್ಞೆಯನ್ನು ವಿಶ್ವತೈಜಸರು ಇಬ್ಬರೂ ಸೇರಿ ಮಾಡಿಕೊಡುವರು. ತುರೀಯನು ಜೀವನಿಗೆ ಸುಷುಪ್ತಿ ದಶೆಯಲ್ಲಿ ಜೀವನ ಸ್ವರೂಪ, ಅಜ್ಞಾನ, ಕಾಲ, ಮತ್ತು ಸುಷುಪ್ತಿ ಸುಖಗಳ ಅರಿವನ್ನು ಪ್ರಾಜ್ಞನಂತೆ ಮಾಡಿಕೊಡುವುದಿಲ್ಲ. ಅಂದರೆ ಪ್ರಜ್ಞಾನಘನನೂ ಅಲ್ಲ. ನಪ್ರಜ್ಞಂ - ಅಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿರುವ ಜೀವನಿಗೆ ನಿರಂತರ ಜ್ಞಾನವನ್ನು ಮಾಡಿಕೊಡುವುದಿಲ್ಲ.*

*ಹಾಗಾದರೆ ತುರೀಯನಿಗೆ ಯಾವ ವ್ಯಾಪಾರ ಇಲ್ಲವೇ? ಹಾಗೇನಿಲ್ಲ. ನಾಪ್ರಜ್ಞಂ - ಚರಮದೇಹವನ್ನು ತೊರೆದು ಮುಕ್ತಿಯನ್ನು ಸೇರಿದ ಜೀವರಿಗೆ ಜ್ಞಾನವನ್ನು ಕೊಡದೆ ಇರುವುದಿಲ್ಲ. ಮುಕ್ತರಿಗೆ ಅವರವರ ಯೋಗ್ಯತಾನುಸಾರ*

*ಸರ್ವಜ್ಞಾನವನ್ನು ತುರೀಯನು ನೀಡಿಯೇ ತೀರುತ್ತಾನೆ. ವಿಶ್ವಾದಿ ಮೂರು ರೂಪಗಳು ಒಳ ಹೊರಗಿನ ಪದಾರ್ಥಗಳನ್ನು ತಿಳಿಸುವ ವ್ಯವಹಾರ ಮೂಲಕವಾಗಿ ಅನುಮೇಯವಾಗಿವೆ. ಹಾಗೆ ಈ ತುರೀಯನು ಅನುಮೇಯನಲ್ಲ. ಅಥವಾ ಅಮುಕ್ತರಜ್ಞಾನಕ್ಕೆ ಗೋಚರನಲ್ಲ. ಮುಕ್ತಿಯಿಲ್ಲದೇ ವ್ಯವಹರಿಸಲು ಬಾರದವನು. ಅನುಮಾಪಕ ಲಕ್ಷಣಗಳಿಲ್ಲದವನು. ಅನುಮಾಪಕ ಲಕ್ಷಣಗಳಿಲ್ಲ-ದಿರುವ ಕಾರಣದಿಂದಲೇ ಚಿಂತನೆಗೆ ನಿಲುಕದವನು. ನಿರ್ದಿಷ್ಟವಾಗಿ ಹೇಳಲು ಬಾರದವನು. 'ಏಕ' ಅಂದರೆ ಸರ್ವೋತ್ತಮವಾದ 'ಆತ್ಮ' ಗುಣಪೂರ್ಣವಾದ ರೂಪವಿರುವುದರಿಂದ ಏಕಾತ್ಮ್ಯನು. ''ಪ್ರತ್ಯಯ'' ಜ್ಞಾನರೂಪನು. 'ಸಾರ' ಆನಂದರೂಪನು. ಈ ಎಲ್ಲ ಗುಣಗಳಿರುವ ಕಾರಣ ಏಕಾತ್ಮ್ಯಪ್ರತ್ಯಯಸಾರನು. ವ್ಯಾಪ್ತನಾದ್ದರಿಂದ ಪ್ರಪಂಚನೂ ಉತ್ತಮಾನಂದಸ್ವರೂಪನಾದ್ದರಿಂದ ಉಪಶಮನೂ ಆಗಿರುವನು. ಹೀಗೆ ತುರೀಯನು ಪ್ರಪಂಚೋಪಶಮ-ನೆನಿಸಿರುವನು. ಅಥವಾ ''ಪ್ರಪಂಚ'' ಎಂದರೆ ದೇಹಸಂಬಂಧ ಈ ದೇಹ ಸಂಬಂಧವನ್ನು ಕಳೆಯುವುದರಿಂದಲೂ ಇವನು ಪ್ರಪಂಚೋಪಶಮನು.*

*'ಸಾರ' ಆನಂದರೂಪನೆಂದರೆ ಜೀವನು ಆಗುವನು. ಭಗವಂತನು ಹಾಗಲ್ಲ ಎನ್ನುವುದಕ್ಕಾಗಿ ಉಪ-ಉತ್ಕೃಷ್ಟ ಶಮ- ಆನಂದವುಳ್ಳವ ಅಂದರೆ ಉತ್ತಮಾನಂದಸ್ವರೂಪನು ಎನ್ನುತ್ತದೆ ಶ್ರುತಿ. ಜೀವನು ಆನಂದರೂಪನು. ಭಗವಂತ ಉತ್ತಮಾನಂದಸ್ವರೂಪ. ಕಾರಣ ಜೀವಾಭೇದ ಇಲ್ಲಿ ಪ್ರತಿಪಾದಿತವಲ್ಲ-ವೆಂದು ಭಾವ. ನಿರ್ದುಃಖಸುಖರೂಪನಾದ್ದರಿಂದ ಶಿವನು. ದ್ವೈತ ಎಂದರೆ ಅಯಥಾರ್ಥಜ್ಞಾನ, ವಸ್ತುವಿನ ನಿಜಸ್ವರೂಪವನ್ನು ಬಿಟ್ಟು ಬೇರೆಯಾಗಿ ತಿಳಿಯುವುದು. ಅಂತಹ ನಾನು ನನ್ನದು ಎನ್ನುವ ಮಿಥ್ಯಾಜ್ಞಾನವನ್ನು ಕಳೆಯುವವನು. ಇಂಥ ತುರೀಯರೂಪವು ಶ್ರೀಹರಿಯ ನಾಲ್ಕನೇ ರೂಪವೆಂದು ಬ್ರಹ್ಮಾದಿ ಜ್ಞಾನಿಗಳು ತಿಳಿಯುತ್ತಾರೆ. ಇಂತಹ ಚತುರೂಪನಾದ ಆತ್ಮನನ್ನು ಮುಮುಕ್ಷುಗಳು ವಿಶೇಷವಾಗಿ ತಿಳಿಯಲೇಬೇಕು.*

***ವಿವರಣೆ** : - ಪ್ರಪಂಚೋಪಶಮ ಎನ್ನುವಲ್ಲಿ ''ಪಚಿವಿಸ್ತಾರೆ'' ಎನ್ನುವ ಕ್ರಿಯಾಪದವು ವಿಸ್ತಾರ ಎನ್ನುವ ಅರ್ಥದಲ್ಲಿದೆ. ಪ್ರಪಂಚ- ಪ್ರಕೃಷ್ಟವಾದ, ವಿಸ್ತಾರ, ಅಂದರೆ ವ್ಯಾಪ್ತನು ಎಂದು ಭಾವ. ಅದ್ವೈತಂ - ದ್ವಿತ್ತೇನ ಇತಂ ದ್ವೈತಂ ವಸ್ತುವಿನ ನಿಜಸ್ವರೂಪಕ್ಕಿಂತಲೂ ಭಿನ್ನವಾದ ಎರಡನೆ ರೀತಿಯಾಗಿ ತಿಳಿಯಲ್ಪಟ್ಟ ವಸ್ತು ದ್ವೀತ, ''ಇಣ್‌ಗತೌ'' ಧಾತುವಿನಿಂದ ಇತಶಬ್ದನಿಷ್ಪನ್ನವಾಗಿದೆ. ದ್ವೀತವೇ*

*ದ್ವೈತ ಎನಿಸಿದೆ. ಇಂತಹ ದ್ವೈತವು ಮಿಥ್ಯಾಜ್ಞಾನವು ಯಾವನಿಂದ ನಿವೃತ್ತಿ-ಯಾಗುವುದೋ ಆವನು ಅದ್ವೈತ ॥ ೧ ॥*

ಉಪನಿಷತ್

ಮಂತ್ರ ನಿರೂಪಿಸುವ ತುರೀಯನ ಮಹಿಮೆ

ಅತ್ರೈತೇ ಶ್ಲೋಕಾ ಭವಂತಿ -

ನಿವೃತ್ತೇಃ ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ ।

ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ ॥ ೨ ॥

ಭಾಷ್ಯಂ

ಸರ್ವದುಃಖಾನಾಂ ನಿವೃತ್ತೇಃ ಕಾರಣಭೂತಸ್ತುರೀಯೋ ದೇವಃ ।

ಹರಿಸ್ತುರೀಯರೂಪೇಣ ಮೋಕ್ಷದಃ ಸಂಪ್ರಕೀರ್ತಿತಃ ।
ದೇವಃ ಸ ಸರ್ವಜೀವಾನಾಂ ಗಮ್ಯತ್ವಾತ್ಸಮುದೀರಿತಃ ॥
ಭಾವಾ ಜೀವಾಃ ಸಮುದ್ದಿಷ್ಟಾ ಭವಂತ್ಯೇತೇ ಯತೋ ವಿಭೋಃ ।
ಈಶಾನಾಮಪಿ ಮುಕ್ತಾನಾಮೀಶಾನಃ ಸೋಽನನಾಚ್ಚ್ಯುತಃ ॥
ಇತಿ ಪ್ರತ್ಯಾಹಾರೇ ॥ ೨ ॥

*ಅನುವಾದ — 'ನಿವೃತ್ತೇಃ ಸರ್ವದುಃಖಾನಾಂ ಪ್ರಭುಃ' ಎಂದರೆ 'ಸರ್ವದುಃಖಗಳ ಪರಿಹಾರಕ್ಕೂ ಕಾರಣನಾದ ದೇವ ತುರೀಯ' ಎಂದರ್ಥ.*

*ಶ್ರೀಹರಿಯು ತುರೀಯರೂಪದಿಂದ ಮೋಕ್ಷವನ್ನು ನೀಡುವವನು. ಶ್ರೀಹರಿ-ಯಿಂದಾಗಿ ಉತ್ಪನ್ನರಾಗುವ ಪ್ರಯುಕ್ತ ಜೀವಾತ್ಮರು 'ಭಾವ' ಎನಿಸಿರುವರು. ಇಂಥಹ ಜೀವಾತ್ಮರಿಗೆ ಪ್ರಾಪ್ತಿಯೋಗ್ಯವಾದುದರಿಂದ ತುರೀಯನು 'ಸರ್ವ ಭಾವಾನಾಂ ದೇವಃ' ಎನಿಸುವನು. 'ಈಶ'ರಾದ ಅಂದರೆ ಸಮರ್ಥರಾದ ಮುಕ್ತಾತ್ಮರಿಗೂ 'ಅನಃ' ಅಂದರೆ ಚೇಷ್ಟಕನಾಗಿರುವ ಪ್ರಯುಕ್ತ ತುರೀಯನು ಈಶಾನ ಎನಿಸಿರುವನು ಎಂದು ಪ್ರತ್ಯಾಹಾರವೆಂಬ ಗ್ರಂಥದಲ್ಲಿ ಹೇಳಿದೆ.*

ಖಂಡಾರ್ಥಃ

ಚತುರ್ಥರೂಪಸ್ಯೋಕ್ತಂ ಮಹಾತ್ಮ್ಯಂ ಸಂವಾದಯಿತುಮಾಹ - ಅತ್ರೈತ ಇತಿ ।

ತುರೀಯಸ್ಯೋಕ್ತಾರ್ಥ ಏತೇ ವಕ್ಷ್ಯಮಾಣಾ ಬ್ರಹ್ಮದೃಷ್ಟಾಃ ಶ್ಲೋಕಾಃ ಸಂವಾದಿನೋ ಭವಂತೀತ್ಯರ್ಥಃ । ಪ್ರಪಂಚೋಪಶಮಮಿತ್ಯಾದಿನೋಕ್ತೇ ಸರ್ವಾನಿಷ್ಟನಿವರ್ತಕತ್ವಾದಿ-

ರೂಪೇಽರ್ಥೇ ಶ್ಲೋಕಮಾಹ - ನಿವೃತ್ತೇರಿತಿ । ಸರ್ವದುಃಖಾನಾಂ ನಿವೃತ್ತೇಃ ಕಾರಣಮಿತಿ ಶೇಷಃ । ಈಶಾನಃ ಈಶಾನ್ ಮುಕ್ತಾನನತಿ ಪ್ರೇರಯತೀತೀಶಾನಃ । ಪ್ರಭುಃ ಸ್ವಾಮೀ । ಅವ್ಯಯಃ ಶಶ್ವದೇಕಪ್ರಕಾರಃ । ಅದ್ವೈತಃ ಮಿಥ್ಯಾಜ್ಞಾನನಿವರ್ತಕಃ । ಸರ್ವಭಾವಾನಾಂ ಸರ್ವಜೀವಾನಾಮ್ । ವಿಷ್ಣೋಃ ಭವಂತಿ ಜಾಯಂತ ಇತಿ ವಾ । 'ಭುಕ್ ಶುದ್ಧಿಚಿಂತಯೋಃ' - ಇತಿ ಕವಿಕಲ್ಪದ್ರುಮೋಕ್ತ್ಯಾ ಚಿಂತಾರ್ಥಸ್ಯ ವಾ ಭವತೇರ್ಣ-ಪ್ರತ್ಯಯೇ ಭಾವ ಇತಿ ಸಿದ್ಧ್ಯಾ ಭಾವಾಶ್ಚೇತನಾ ಇತಿ ಲಾಭಾತ್, ತೇಷಾಂ ಜೀವಾನಾಂ ದೇವಃ ಪ್ರಾಪ್ಯಃ । ಗತ್ಯರ್ಥಾದ್ದೀವ್ಯತೇಃ ಕರ್ಮಣಿ ಘಞ್ಪ್ರತ್ಯಯಃ । ತುರ್ಯಸ್ತುರೀಯಶ್ಚತುರ್ಥಃ । 'ಚತುರಶ್ಛಯತಾವಾದ್ಯಕ್ಷರಲೋಪಶ್ಚ' ಇತಿ ಚತುಶ್ಶಬ್ದಸ್ಯಾದ್ಯಾಕ್ಷರಲೋಪೇ ಯತ್ಪ್ರತ್ಯಯೇ ತುರ್ಯ ಇತಿ ಸಿದ್ಧೇಃ । ವಿಭುಃ ಸಮರ್ಥಃ । ಸ್ಮೃತಃ, ಮಂತ್ರದ್ರಷ್ಟ್ರಾ ಬ್ರಹ್ಮಣೇತಿ ಯೋಜ್ಯಮ್ ॥ ೨ ॥

***ಅನುವಾದ*** *- ಶ್ರುತಿಯು ತುರೀಯ ರೂಪವನ್ನು ವರ್ಣಿಸಿ ಆ ವಿಷಯದಲ್ಲಿ ಬ್ರಹ್ಮದೃಷ್ಟವಾದ ಮಂತ್ರಗಳ ಸಂವಾದವನ್ನು ನೀಡುತ್ತದೆ. ಈ ತುರೀಯ ಪರಮಾತ್ಮನು ಸರ್ವದುಃಖಗಳ ನಿವೃತ್ತಿಗೆ ಕಾರಣನು. ''ಈಶ'' ಅಂದರೆ ಮುಕ್ತರನ್ನು ''ಅನ'' ಪ್ರೇರಿಸುವವನು ಅಂದರೆ ಮುಕ್ತ ನಿಯಾಮಕನೆಂದು ಭಾವ. ಸ್ವಾಮಿಯು, ಯಾವ ವಿಕಾರಗಳಿಲ್ಲದೇ ಶಶ್ವದೇಕಪ್ರಕಾರನಾಗಿರುವನು. ಮಿಥ್ಯಾಜ್ಞಾನ ದೂರ-ಮಾಡುವನು. 'ಸರ್ವಭಾವ' ಎಲ್ಲ ಜೀವರಿಗೆ 'ದೇವ' ಪ್ರಾಪ್ಯನು. ಮತ್ತು ತುರೀಯ ಸಮರ್ಥನು.*

*ವಿವರಣೆ : ''ಸರ್ವಭಾವ'' ಎನ್ನುವಲ್ಲಿ 'ವಿಷ್ಣೋಃ ಭವಂತಿ'' ಭಗವಂತನಿಂದ ಜನಿಸುವರು ಕಾರಣ ಎಲ್ಲ ಜೀವರು ಭಾವರು.*

*ಅಥವಾ ಕವಿಕಲ್ಪದ್ರುಮದಲ್ಲಿ ಹೇಳಿದ 'ಭುಕ್‌ಶುದ್ಧಿಚಿಂತಯೋಃ' ಚಿಂತಾರ್ಥಕವಾದ ಭೂ ಧಾತುವಿನಿಂದಾಗಲಿ ಭಾವ ಎನ್ನುವ ರೂಪ ಸಿದ್ಧಿಸುವುದು.*

*''ಚತುರಶ್ಛಯತಾವಾದ್ಯಕ್ಷರಲೋಪಶ್ಚ'' ಎನ್ನುವ ವಾರ್ತಿಕದಿಂದ ಚತುರ್‌ಶಬ್ದಕ್ಕೆ ಘಞ್ ಪ್ರತ್ಯಯವಾಗಿ ಆದ್ಯಕ್ಷರವಾದ ಚಕಾರಕ್ಕೆ ಲೋಪವಾಗಿ ''ತುರ್ಯ'' ಎಂಬ ಶಬ್ದ ನಿಷ್ಪನ್ನವಾಗುವುದು.*

ಉಪನಿಷತ್

ವಿಶ್ವಾದಿರೂಪಗಳ ನಿಯಮನಾದಿ ವ್ಯಾಪಾರಗಳಲ್ಲಿಯ ಸಾಧರ್ಮ್ಯವೈಧರ್ಮ್ಯಗಳು.

**ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।**
**ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿಧ್ಯತಃ ॥ ೩ ॥**

ಭಾಷ್ಯಂ

ಕಾರ್ಯಕಾರಣಬಂಧಸ್ಯ ತದಧೀನತ್ವತೋ ವಿಭುಃ ।
ವಿಶ್ವಾದಿರೂಪೋ ಭಗವಾನ್ ಬದ್ಧ ಇತ್ಯುಚ್ಯತೇ ಶ್ರುತೌ ।
ಕುತೋ ಬಂಧಃ ಪರಸ್ಯಾಸ್ಯ ಬಂಧೇಶಸ್ಯ ಚಿದಾತ್ಮನಃ ॥ ಇತಿ ಚ ।
ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತೀತಿ ।
ಸ ಜೀವಃ ಸಃ ಪ್ರಕೃತಿಃ ಸ ಜನಯತಿ ಸ ಪ್ರಕರೋತೀತಿ ।
ಸೋಽವರಃ ಸೋಽನಿತ್ಯಃ ಸೋಽವರಯತಿ ಸೋಽನಿತ್ಯಯತಿ ॥
ಇತಿ ಕೌಷಾರವಶ್ರುತಿಃ ।

ವಿಷ್ಣೋರ್ಗುಣೋಕ್ತಿಪರತಾ ಮಮ ನಿತ್ಯಂ ಸುರೇಶ್ವರಾಃ ।
ತದರ್ಥಮನ್ಯದ್ ವಚನಮತಸ್ತಸ್ಯ ವಿರೋಧಿ ಯತ್ ।
ತನ್ಮಮಾರ್ಥೋ ನ ಹಿ ಕ್ವಾಪಿ ಸಾಹಂ ತತ್ಸರಣಾತ್ ಸದಾ ।
ಸರಸ್ವತೀತಿ ಸಂಪ್ರೋಕ್ತಾ ತಸ್ಮಾಜ್ಜ್ಞೇಯಾ ಹರೇರ್ಗುಣಾಃ ॥
ಇತಿ ಮಹೋಪನಿಷದಿ ॥ ೩ ॥

*ಅನುವಾದ — ವಿಶ್ವ ತೈಜಸನು ಕಾರ್ಯಕಾರಣಬದ್ಧರೆಂದೂ ಪ್ರಾಜ್ಞರು ಕಾರಣಬದ್ಧನೆಂದೂ ಶ್ರುತಿಯಲ್ಲಿ ಹೇಳಿದುದರ ಭಾವ. ಭಗವಂತನ ಈ ರೂಪಗಳು ಬಂಧನಕ್ಕೊಳಗಾಗಿವೆ ಎಂದಲ್ಲ. ಹೊರತು, ಕಾರ್ಯಬಂಧನ ಮತ್ತು ಕಾರಣ ಬಂಧನಗಳು ವಿಶ್ವಾದಿ ಭಗವದ್ರೂಪಗಳಿಗೆ ಅಧೀನ ಎಂದರ್ಥ. ಅದರಿಂದಾಗಿಯೇ, ಅವುಗಳನ್ನು 'ಕಾರ್ಯಕಾರಣಬದ್ಧರು' ಇತ್ಯಾದಿಯಾಗಿ ಹೇಳಲಾಗುತ್ತದೆ. ಸರ್ವೋತ್ತಮನಾಗಿದ್ದು ಆನಂದ ಸ್ವರೂಪಿಯಾದ, ಬಂಧಕ್ಕೂ ಒಡೆಯನಾದ ಶ್ರೀಹರಿಗೆ ಬಂಧನವು ಹೇಗೆ ತಾನೆ ಬಂದೀತು? ಎಂದು ಪ್ರತ್ಯಾಹಾರವೆಂಬ ಗ್ರಂಥದಲ್ಲಿ ಹೇಳಲಾಗಿದೆ.*

*ಕೌಷಾರವ ಶ್ರುತಿಯು ಬದ್ಧ, ದುಃಖೀ ಮೊದಲಾದ ಶಬ್ದಗಳು ಹೇಗೆ ಭಗವದ್ವಾಚಕಗಳಾಗಿವೆ ಎಂಬುದನ್ನು ವಿವೇಚಿಸಿದೆ - ಅವನು ಜೀವಾತ್ಮರನ್ನು ಸಂಸಾರ ಬಂಧನದಲ್ಲಿ ಬಂಧಿಸುವುದರಿಂದ ಬದ್ಧ ಎಂದೂ ಅವರಿಗೆ ದುಃಖನೀಡುವುದರಿಂದ ದುಃಖೀ ಎಂದೂ ಅವರು ಪ್ರಾಣವನ್ನು ಧರಿಸಿರುವಂತೆ ಮಾಡುವುದರಿಂದ ಜೀವ ಎಂದೂ ನಿಕೃಷ್ಟ ವಸ್ತುಗಳನ್ನು ನಿಕೃಷ್ಟಗಳನ್ನಾಗಿ ಮಾಡಿರುವುದರಿಂದ 'ಅವರ' ಎಂದೂ ಅನಿತ್ಯ ಪದಾರ್ಥಗಳನ್ನು ಅನಿತ್ಯಗಳನ್ನಾಗಿ ಮಾಡಿರುವುದರಿಂದ 'ಅನಿತ್ಯ' ಎಂದೂ ಹೇಳಲ್ಪಟ್ಟಿರುವನು.*

*ಸರಸ್ವತೀದೇವಿಯು ಅಭಿಮಾನಿನಿಯಾಗಿರುವ ಸಕಲ ವಾಙ್ಮಯಕ್ಕೆ ಶ್ರೀ ಹರಿಯ ಗುಣಪ್ರತಿಪಾದನೆಯಲ್ಲೇ ತಾತ್ಪರ್ಯವಿರುವುದನ್ನೂ ಇದಕ್ಕೆ ವಿರುದ್ಧವಾಗಿ ಆಪಾತತಃ ಶ್ರೀಹರಿಗೆ ದೋಷಗಳನ್ನು ಹೇಳುವಂಥಹಾ ಮಾತುಗಳನ್ನು ಕಂಡಲ್ಲಿ ಅವುಗಳಿಗೆ ಗುಣಪರವಾಗಿಯೇ ವ್ಯಾಖ್ಯಾನ ಮಾಡಬೇಕೆಂಬುದನ್ನೂ ಮಹೋಪನಿಷತ್ತೂ ಸರಸ್ವತಿಯ ಮಾತಿನ ಮೂಲಕವೇ ತಿಳಿಸಿದೆ- ಹೇ ದೇವತಾ ಶ್ರೇಷ್ಠರೇ! ನಾನು (ಸರಸ್ವತೀದೇವೀ) ಅಭಿಮಾನಿನಿಯಾಗಿರುವ ವಾಙ್ಮಯಕ್ಕೆ ಸರ್ವದಾ ಶ್ರೀಹರಿಯ ಗುಣಪ್ರತಿಪಾದನೆಯಲ್ಲೇ ತಾತ್ಪರ್ಯ. ಬ್ರಹ್ಮಾದಿಗಳ ಪ್ರಶಂಸೆಯನ್ನು ಮಾಡುವುದೂ ಹರಿಯ ಮಹಿಮೆಯನ್ನು ಹೇಳುವುದಕ್ಕಾಗಿಯೇ. ಗುಣಪ್ರತಿಪಾದನೆಗೆ ವಿರೋಧಿಯಂತೆ ಮಾತುಗಳು ಕಂಡು ಬಂದಲ್ಲಿ ಅದರ ಮೇಲ್ನೋಟದ ಅರ್ಥ ನನಗೆ ಸಮ್ಮತವಲ್ಲ. ಶ್ರೀ ಹರಿಯ ಗುಣೋತ್ಕರ್ಷಕ್ಕೆ ವಿರೋಧಿಯಾದ ಅರ್ಥದಿಂದ ಹಿಂದೆ ಸರಿಯುವುದರಿಂದಲೇ 'ಸರಸ್ವತಿ' ಎಂಬ ಸಾರ್ಥಕ ಹೆಸರುಳ್ಳವಳು ನಾನು. ಅಥವಾ ಶ್ರೀಹರಿಯ ಗುಣೋತ್ಕರ್ಷವನ್ನು ಹೇಳಲು ಮುಂದೆ ಸರಿಯುವುದರಿಂದ ನಾನು ಸಾರ್ಥಕವಾಗಿ ಸರಸ್ವತಿ. ಆದ್ದರಿಂದ ನಾನು ಅಭಿಮಾನಿನಿಯಾಗಿರುವ ಸಕಲ ವಾಙ್ಮಯದಲ್ಲಿಯೂ ಶ್ರೀ ಹರಿಯ ಗುಣಗಳೇ ಪ್ರತಿಪಾದಿತವಾಗಿವೆ ಎಂದು ತಿಳಿಯಬೇಕು ॥ ೩ ॥*

**ಖಂಡಾರ್ಥಃ**

ನಾಂತಃಪ್ರಜ್ಞಂ ನ ಬಹಿಃಪ್ರಜ್ಞಮಿತಿ ಯತ್ತುರೀಯಸ್ಯ ವಿಶ್ವಾದಿರೂಪತ್ರಯ-ವೈಧರ್ಮ್ಯಮುಕ್ತಂ ತತ್ರ ಮಂತ್ರಮಾಹ - ಕಾರ್ಯೇತಿ ।

ಅಜ್ಞಾನಕಾರ್ಯಭೂತೋಽಹಂಮಮತಾದಿಭ್ರಮಃ । ತದ್ರೂಪಜಾಗ್ರದ್ಬದ್ಧಃ, ತತ್ಕಾರಣಾವಿದ್ಯಾಬದ್ಧಃ, ಜೀವನಿಷ್ಠತಾದೃಶಭ್ರಮರೂಪಜಾಗ್ರತ್ಕಾರಣಬಂಧಸ್ವಾಮೀ ವಿಶ್ವ ಇತ್ಯರ್ಥಃ । ತೈಜಸಸ್ತು ಅವಿದ್ಯಾಕಾರ್ಯಭೂತೋಕ್ತರೂಪಸ್ವಾಪ್ನಪದಾರ್ಥಭ್ರಮೇಣ ತತ್ಕಾರಣಾಜ್ಞಾನೇನ ಚ ಬದ್ಧಃ, ಜೀವನಿಷ್ಠತಾದೃಶಬಂಧಸ್ವಾಮೀತ್ಯರ್ಥಃ । ಪ್ರಾಜ್ಞಸ್ತು ತತ್ಕಾರಣಾಜ್ಞಾನರೂಪಸುಪ್ತಿಬದ್ಧಃ ಸುಪ್ತಿಬಂಧಸ್ವಾಮೀ । ತಥಾ ಚ ಸೂತ್ರಮ್ - 'ತದಧೀನತ್ವಾದರ್ಥವತ್' (ಬ್ರ.ಸೂ. ೨-೪-೩) ಇತಿ । ತುರ್ಯೇ ಚತುರ್ಥೇ ರೂಪೇ ದ್ವೌ ಕಾರ್ಯಕಾರಣಬಂಧನಿಯಮನವ್ಯಾಪಾರೌ ವಾ ಕಾರಣಮಾತ್ರಬಂಧ-ನಿಯಮನವ್ಯಾಪಾರೌ ವಾ ದ್ವಾವಪಿ ನ ಸಿದ್ಧ್ಯತಃ ನ ಸ್ತ ಇತ್ಯರ್ಥಃ ॥ ೩ ॥

***ಅನುವಾದ*** *- ಹೀಗೆ ತುರೀಯನ ಮಹಿಮೆಯನ್ನು ಹೇಳಿ ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ರೂಪಗಳಲ್ಲಿಯ ನಿಯಮನಾದಿ ವ್ಯಾಪಾರಗಳಲ್ಲಿಯ ಸಾಧರ್ಮ್ಯ - ವೈಧರ್ಮ್ಯಗಳನ್ನು ಮಂತ್ರಗಳು ಹೇಳುವವು—*

*ಜೀವಾತ್ಮರಲ್ಲಿ ಅಜ್ಞಾನಕಾರ್ಯವಾದ 'ನಾನು ನನ್ನದು' ಮೊದಲಾದ ಭ್ರಾಂತಿ ಹಾಗೂ ಅದಕ್ಕೆ ಕಾರಣವಾದ ಅವಿದ್ಯೆ ಇವುಗಳ ಬಂಧನವಿದೆ. ವಿಶ್ವ ಮತ್ತು ತೈಜಸರು ಈ ಎರಡು ವಿಧವಾದ ಬಂಧನಗಳಿಗೂ ನಿಯಾಮಕರಾಗಿರುವರು. ಪ್ರಾಜ್ಞ ಜೀವರ ಅವಿದ್ಯಾರೂಪವಾದ ಸುಷುಪ್ತಿಯ ಬಂಧನಕ್ಕೆ ನಿಯಾಮಕ. ತುರೀಯ ಮಾತ್ರ ಭ್ರಮೆ ಮತ್ತು ಅದಕ್ಕೆ ಕಾರಣವಾದ ಅವಿದ್ಯೆ ಇವೆರಡರ ಬಂಧನಕ್ಕಾಗಲೀ, ಕೇವಲ ಅವಿದ್ಯೆಯ ಬಂಧನಕ್ಕಾಗಲೀ ನಿಯಾಮಕನಲ್ಲ.*

*ವಿಶ್ವತೈಜಸಪ್ರಾಜ್ಞರು ಜೀವರಲ್ಲಿರುವ ಬಂಧನಕ್ಕೆ ಸ್ವಾಮಿಗಳು, ಬಂಧವು ಇವರ ಅಧೀನ ಎಂಬುದನ್ನು ''ತದಧೀನತ್ವಾದರ್ಥವತ್'' ಎಂಬ ಸೂತ್ರವೂ ಹೇಳುತ್ತದೆ.*

**ಉಪನಿಷತ್**

**ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಂ ।**
**ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ ಸರ್ವದೃಕ್ ಸದಾ ॥ ೪ ॥**

**ಭಾಷ್ಯಂ**

ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ಚಾಪಿ ನಾನೃತಂ ।
ಪ್ರಾಜ್ಞಃ ಸಂವೇದಯೇತ್ ಕಿಂಚಿಜ್ಜೀವಕಾಲತಮೋ ವಿನಾ ।
ಸುಪ್ತ್ಯವಸ್ಥಾಂ ಸುಖಂ ಚಾಪಿ ವಿನಾ ನಾನ್ಯತ್ ಪ್ರದರ್ಶಯೇತ್ ।
ಸರ್ವಂ ತು ದರ್ಶಯೇನ್ಮುಕ್ತೌ ತುರೀಯಃ ಪರಮೇಶ್ವರಃ ।

ಇತಿ ಪ್ರತ್ಯಯೇ ।

ಸ್ವತಂತ್ರೇ ಕರ್ತೃಶಬ್ದಃ ಸ್ಯಾತ್ ಪ್ರಾಜ್ಞಸ್ಯಾವೇದನಂ ಯಥಾ ।
ಸರ್ವಪ್ರದರ್ಶಕೇ ಚೈವ ತುರೀಯೇ ಸರ್ವದರ್ಶನಂ ॥

ಇತಿ ಬ್ರಹ್ಮತರ್ಕೇ ॥ ೪ ॥

***ಅನುವಾದ*** *- ಪ್ರಾಜ್ಞನು ಜೀವ, ಕಾಲ, ಅಜ್ಞಾನ, ಸುಪ್ತ್ಯವಸ್ಥೆ ಹಾಗೂ ಸುಖ ಇವುಗಳನ್ನು ಹೊರತಾಗಿ ತನ್ನ ಸ್ವರೂಪವನ್ನಾಗಲೀ ಜೀವಾದಿಗಳಿಗಿಂತ ಇತರ ವಸ್ತುಗಳನ್ನಾಗಲೀ ಪುಣ್ಯಪಾಪಗಳನ್ನಾಗಲೀ ಜೀವಾತ್ಮರಿಗೆ ತೋರಿಸಿಕೊಡುವುದಿಲ್ಲ. ತುರೀಯನಾದರೋ ಮುಕ್ತಿಯಲ್ಲಿ ಎಲ್ಲವನ್ನೂ ತೋರಿಸಿಕೊಡುವನು. ಹೀಗೆಂದು ಪ್ರತ್ಯಯವೆಂಬ ಗ್ರಂಥದಲ್ಲಿದೆ.*

*ಕ್ರಿಯೆಯಲ್ಲಿ ಸ್ವತಂತ್ರನಾಗಿರುವವನೇ ಮುಖ್ಯ ಕರ್ತೃ. ಇದಕ್ಕೆ ಉದಾಹರಣೆಗಳು ಈ ಉಪನಿಷತ್ತಿನ ಪ್ರಯೋಗಗಳು — ಪ್ರಾಜ್ಞನು ಜೀವನ ಸ್ವರೂಪವನ್ನು 'ನ ಸಂವೇತ್ತಿ - ತಿಳಿಯುವುದಿಲ್ಲ' ಎಂದಿದೆ. ವಸ್ತುತಃ ತಿಳಿಯದವ ಜೀವ. ಆದರೆ ನಿದ್ರೆಯಲ್ಲಿ ಜೀವನು ತಿಳಿಯದಿರುವುದು ಜೀವನ ಅಧೀನವಲ್ಲ. ಅದು ಪ್ರಾಜ್ಞನ ಅಧೀನ. ಅವನೇ ಅದಕ್ಕೆ ಸ್ವತಂತ್ರ ನಿಯಾಮಕ. ಆದ್ದರಿಂದ ಅವನನ್ನು ಉಪನಿಷತ್ತು 'ನ ಸಂವೇತ್ತಿ' ಎಂದು ಹೇಳಿದೆ. ಆದರಂತೆ 'ಮುಕ್ತಿಯಲ್ಲಿ ಎಲ್ಲವನ್ನು ನೋಡುವವ ಸರ್ವದೃಕ್ - ತುರೀಯ' ನೆಂದಿದೆ. ವಸ್ತುತಃ ನೋಡುವವನು ಜೀವ. ಆದರೆ ಅದಕ್ಕೆ ನಿಯಾಮಕ ತುರೀಯನಾದ್ದರಿಂದ ಅವನನ್ನೇ ಸರ್ವದೃಕ್ ಎಂದು ಉಪನಿಷತ್ತು ಹೇಳಿದೆ - ಹೀಗೆ ಬೃಹತ್ತರ್ಕವಚನವಿದೆ ॥ ೪ ॥*

ಖಂಡಾರ್ಥಃ

ನಪ್ರಜ್ಞಾನಘನಂ ನಾಪ್ರಜ್ಞಮಿತ್ಯುಕ್ತಪ್ರಾಜ್ಞವೈಧರ್ಮ್ಯೇ ಮಂತ್ರಮಾಹ - ನಾತ್ಮಾನಮಿತಿ ।

ಆತ್ಮಾನಂ ಪ್ರಾಜ್ಞಃ ಸ್ವಸ್ವರೂಪಂ ನ ಸಂವೇತ್ತಿ ನ ಸಂವೇದಯತ್ । ನ ಪರಾನ್ ನ ಸತ್ಯಂ ನಾಪಿ ಚಾನೃತಂ ಸಂವೇದಯೇದಿತ್ಯನ್ವಯಃ । ಜೀವಸ್ವರೂಪಸುಖಕಾಲಾಜ್ಞಾನಾನಿ ವಿನಾಽನ್ಯತ್ ಕಿಮಪಿ ನ ಸಂವೇದಯೇದಿತ್ಯರ್ಥಃ । ತುರೀಯಸ್ತು ಸರ್ವದೃಕ್ ಸರ್ವಂ ದರ್ಶಯತೀತಿ ಸರ್ವದೃಕ್, ಮುಕ್ತೌ ತತ್ತದ್ಯೋಗ್ಯಂ ಸರ್ವಂ ಪ್ರದರ್ಶಯತೀತ್ಯರ್ಥಃ । ಯದ್ವಾ ಸರ್ವಂ ಪಶ್ಯತೀತ್ಯೇವ ಸರ್ವದೃಕ್ । ಸರ್ವಪ್ರದರ್ಶಕ ಇತಿ ವಕ್ತವ್ಯೇಽಪ್ಯೇವಮುಕ್ತಿಃ ಸ್ವಾತಂತ್ರ್ಯಾಭಿಪ್ರಾಯೇಣ ॥ ೪ ॥

*ಅನುವಾದ - ಪ್ರಾಜ್ಞರೂಪೀ ಶ್ರೀಹರಿಯು ತನ್ನ ಸ್ವರೂಪವನ್ನಾಗಲೀ ಜೀವಸ್ವರೂಪ, ಅಜ್ಞಾನ ಕಾಲಾದಿಗಳನ್ನು ಹೊರತು ಇತರ ಪದಾರ್ಥಗಳನ್ನಾಗಲೀ ತೋರಗೊಡಲಾರನು. ಸತ್ಯದಿಂದ ಲಭಿಸುವ ಪುಣ್ಯವನ್ನಾಗಲೀ ಸುಳ್ಳಿನಿಂದ ಬರುವ ಪಾಪವನ್ನಾಗಲೀ ತೋರಿಸಿಕೊಡಲಾರನು. ಆದರೆ ಮುಕ್ತಿದೆಸೆಯಲ್ಲಿ ಜೀವಾತ್ಮರಿಗೆ ಅವರವರ ಯೋಗ್ಯತಾನುಸಾರವಾಗಿ ಎಲ್ಲವನ್ನೂ ತೋರಿಸಿ-ಕೊಡುವನು. ಭಗವಂತನಿಗೆ ಎಲ್ಲವನ್ನು ತೋರಿಸುವ ಸ್ವಾತಂತ್ರ್ಯ ಉಂಟು ಎಂಬ ಅಭಿಪ್ರಾಯದಿಂದ "ಸರ್ವಪ್ರದರ್ಶಕ" ಎಲ್ಲವನ್ನು ತೋರಿಸುವನು ಎಂದು ಹೇಳುವಲ್ಲಿ "ಸರ್ವದೃಕ್" ಎಂದಿದೆ ಶ್ರುತಿಯು.*

ಉಪನಿಷತ್

ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞ ತುಲ್ಯಯೋಃ ।
ಬೀಜನಿದ್ರಾಯುತಃ ಪ್ರಾಜ್ಞಃ ಸಾ ತು ತುರ್ಯೇ ನ ವಿದ್ಯತೇ ॥ ೫ ॥

ಭಾಷ್ಯಂ

ನಿದ್ರಾಯುತಾಸ್ತು ವಿಶ್ವಾದ್ಯಾಸ್ತದಧೀನಾ ಯತೋ ಹಿ ಸಾ ।
ಯಥಾ ಭೃತ್ಯಯುತಃ ಸ್ವಾಮೀ ನಹ್ಯಜ್ಞಾನಂ ಪರಾತ್ಮನಃ ॥ ಇತಿ ಚ ।
ಅಭೇದಮಪಿ ತದ್ಬ್ರಹ್ಮ ಬಹುರೂಪಂ ವಿಶೇಷತಃ ।
ಕರೋತಿ ನ ಕರೋತೀತಿ ವ್ಯವಹಾರ್ಯಂ ಸ್ವಶಕ್ತಿತಃ ॥ ಇತಿ ಚ ।

ನ ಸಂವೇದಯತೀತಿ ಅಸ್ವೀಕಾರೇ 'ತುರ್ಯಂ ತತ್ ಸರ್ವದೃಕ್ಸದಾ' 'ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುಲ್ಯಯೋಃ'

ಇತಿ ಚ ವಿರುದ್ಧಮ್ । ದ್ವೈತಗ್ರಹಣಾಕಾರಣತ್ವಂ ತುಲ್ಯಮಿತ್ಯರ್ಥಃ ।
ದ್ವೈತಂ ನ ಗ್ರಾಹಯೇತ್ತುರ್ಯೋ ನ ಚ ಪ್ರಾಜ್ಞಃ ಕಥಂಚನ ।
ದ್ವೈತಗ್ರಹಣಬೀಜಂ ತು ನಿದ್ರಾ ಪ್ರಾಜ್ಞಂ ಸಮಾಶ್ರಿತಾ ।
ಇತಿ ಪ್ರಕಟಶ್ರುತಿಃ ॥ ೫ ॥

***ಅನುವಾದ*** *— ಅವಿದ್ಯೆಯು ವಿಶ್ವಾದಿಗಳ ಅಧೀನವಾಗಿರುವುದರಿಂದ ಆ ರೂಪಗಳು ಅವಿದ್ಯೆಯಿಂದ ಕೂಡಿವೆ ಎಂದು (ನಿದ್ರಾಯುತಃ) ಹೇಳಲಾಗುತ್ತದೆ. ಸೇವಕನು ಒಡೆಯನ ಅಧೀನನಾಗಿರುವುದರಿಂದ 'ಸೇವಕನಿಂದ ಕೂಡಿರುವವನು ಒಡೆಯ' ಎನ್ನುವಂತೆ. ಹೊರತು, ವಿಶ್ವಾದಿರೂಪಗಳಿಗೆ ಅಜ್ಞಾನವಿದೆ ಎಂದು ಅದರ ಅರ್ಥವಲ್ಲ. ಸರ್ವೋತ್ತಮನಾದ ಶ್ರೀಹರಿಗೆ ಅವಿದ್ಯೆ ಹೇಗೆ ಇದ್ದೀತು! - ಎಂದೂ ಬೃಹತ್ತರ್ಕವಚನವಿದೆ.*

*ಭಗವಂತನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿದ್ದರೂ ವಿಶೇಷಬಲದಿಂದ ಅವನು ಬಹುರೂಪನೆನಿಸಿದ್ದಾನೆ. ಆ ವಿಶೇಷವೆಂಬ ತನ್ನ ಶಕ್ತಿಯಿಂದಲೇ ಭಗವಂತನು ಒಂದು ರೂಪದಿಂದ ಯಾವುದಾದರೊಂದು ಚಟುವಟಿಕೆಯನ್ನು ನಿರ್ವಹಿಸುವನೆಂಬುದಾಗಿಯೂ ಮತ್ತೊಂದು ರೂಪದಿಂದ ನಿರ್ವಹಿಸುವುದಿಲ್ಲ ಎಂಬುದಾಗಿಯೂ ವ್ಯವಹರಿಸಲ್ಪಡುತ್ತಾನೆ. ಎಂದೂ ಬೃಹತ್ತರ್ಕವಚನವಿದೆ.*

*'ಪ್ರಾಜ್ಞಃ ಕಿಂಚನ ಸಂವೇತ್ತಿ' ಇತ್ಯಾದಿ ಪ್ರಯೋಗಗಳನ್ನು 'ನ ಸಂವೇದಯತಿ — ತಿಳಿಯುವಂತೆ ಮಾಡುವುದಿಲ್ಲ' ಎಂದು ಮುಂತಾದ ಅರ್ಥದಲ್ಲಿ ಹೊಂದಿಸಬೇಕು. ಇಲ್ಲದಿದ್ದರೆ 'ತುರ್ಯಂ ತತ್ ಸರ್ವದೃಕ್ ಸದಾ- ತುರೀಯನು ಎಲ್ಲವನ್ನು ನೋಡುವನು' ಎಂದು ಹೇಳಿ 'ದ್ವೈತಸ್ಯಾಗ್ರಹಣಂ ತುಲ್ಯಂ ಉಭಯೋಃ - ದ್ವೈತವನ್ನು ನೋಡದಿರುವುದು ಪ್ರಾಜ್ಞ ಹಾಗೂ ತುರೀಯರಲ್ಲಿ ಸಮಾನವಾಗಿದೆ' ಎನ್ನುವುದು ಪರಸ್ಪರ ವಿರುದ್ಧವಾದೀತು. ನಮ್ಮ ವ್ಯಾಖ್ಯಾನದಲ್ಲಿ, ಸರ್ವದೃಕ್ ಎಂದರೆ ಮುಕ್ತಿಯಲ್ಲಿ ಎಲ್ಲವನ್ನೂ ನೋಡುವಂತೆ ಮಾಡುವವನು ಎಂದೂ 'ದ್ವೈತಸ್ಯ ಅಗ್ರಹಣಂ ತುಲ್ಯಂ' ಎಂದರೆ ದೇಹಾದಿಗಳಲ್ಲಿ ಸ್ವಾತಂತ್ರ್ಯ ಭ್ರಮಕ್ಕೆ ಕಾರಣವಾಗದಿರುವುದು ಪ್ರಾಜ್ಞ ತುರೀಯರಿಬ್ಬರಲ್ಲೂ ಸಮಾನ ಎಂದೂ ಅರ್ಥ.*

*ತುರೀಯನಾಗಲಿ ಪ್ರಾಜ್ಞನಾಗಲಿ ಸ್ವಾತಂತ್ರ್ಯಭ್ರಮವನ್ನು ಉಂಟು ಮಾಡುವುದಿಲ್ಲ. ಜೀವರಿಗೆ ಸ್ವಾತಂತ್ರ್ಯ ಭ್ರಮೆ ಬರಲು ಕಾರಣವಾದ ಮೂಲಾವಿದ್ಯೆಯಾದರೋ ಪ್ರಾಜ್ಞರೂಪೀ ಭಗವಂತನ ಅಧೀನದಲ್ಲಿ ಇದೆ. ಎಂದು ಪ್ರಕಟಶ್ರುತಿಯಲ್ಲಿದೆ ॥ ೫ ॥*

**ಖಂಡಾರ್ಥಃ**

**ಶಿವಮದ್ವೈತಮಿತಿ ತುರೀಯಸ್ಯ ಯನ್ಮಿಥ್ಯಾಜ್ಞಾನನಿವರ್ತಕತ್ವಮುಕ್ತಂ ತತ್ ಪ್ರಾಜ್ಞಸ್ಯಾಪಿ ಸಮಮಿತಿ ವದಂಸ್ತತ್ತುರೀಯಸ್ಯ ವೈಲಕ್ಷಣ್ಯಾಂತರಮಾಹ - ದ್ವೈತಸ್ಯೇತಿ ।**

**ದ್ವೈತಸ್ಯ ದೇಹಗೇಹಾದೌ ಸ್ವಾತಂತ್ರ್ಯಸ್ಯಾಗ್ರಹಣಂ ಗ್ರಹಣಾಹೇತುತ್ವಂ, ದೇಹಾದೌ ಸ್ವಾತಂತ್ರ್ಯಭ್ರಮಾಜನಕತ್ವಂ ಪ್ರಾಜ್ಞತುರ್ಯಯೋಸ್ತುಲ್ಯಂ ಸಮಮ್ । ಬೀಜೇತಿ । ದೇಹಗೇಹಾದೌ ಸ್ವಾತಂತ್ರ್ಯಬುದ್ಧಿಬೀಜಭೂತಾ ಮೂಲಾವಿದ್ಯಾ ಬೀಜನಿದ್ರಾ । ತಯಾ ಯುತಃ, ತದ್ಯುಕ್ತತ್ವಪ್ರದಃ ಪ್ರಾಜ್ಞಃ । ಸಾ ಚ ಬೀಜನಿದ್ರಾಽಪೀತ್ಯರ್ಥಃ ॥ ೫ ॥**

*__ಅನುವಾದ__ - ತುರೀಯನಿಗೆ ಹೇಳಿದ ಅನ್ಯಥಾ ಜ್ಞಾನ ನಿವರ್ತಕತ್ವವು ಪ್ರಾಜ್ಞನಿಗೂ ಉಂಟು, ಎಂಬುದರ ಜತೆಯಲ್ಲೇ ತುರೀಯನಿಗೂ ಮತ್ತೊಂದು ತೆರನಾದ ವೈಲಕ್ಷಣ್ಯವನ್ನು ಹೇಳುತ್ತದೆ - ಜೀವನಿಗೆ ದೇಹಾದಿಗಳಲ್ಲಿ ಸ್ವಾತಂತ್ರ್ಯ ಭ್ರಮೆಯು ಬರುವಂತೆ ಮಾಡದಿರುವುದು ಪ್ರಾಜ್ಞ ಹಾಗೂ ತುರೀಯ ಈ ಇಬ್ಬರಲ್ಲೂ ಸಮಾನವೇ. ಆದರೆ ಪ್ರಾಜ್ಞನು ಆ ಸ್ವಾತಂತ್ರ್ಯಭ್ರಮೆಗೆ ಕಾರಣವಾದ ಅವಿದ್ಯೆಗೆ ನಿಯಾಮಕನಾಗಿರುವನು, ತುರೀಯನು ಅದಕ್ಕೆ ನಿಯಾಮಕನಲ್ಲ.*

ಉಪನಿಷತ್

ಸ್ವಪ್ನನಿದ್ರಾಯುತಾವಾದ್ಯೌ ಪ್ರಾಜ್ಞಸ್ತ್ವಸ್ವಪ್ನನಿದ್ರಯಾ ।
ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ ॥ ೬ ॥

ಖಂಡಾರ್ಥಃ

ಪ್ರಕಾರಾಂತರೇಣ ವಿಶ್ವಾದೇಃ ಸಾಧರ್ಮ್ಯವೈಧರ್ಮ್ಯೆ ಆಹ - ಸ್ವಪ್ನನಿದ್ರೇತಿ ।

ಉಪಲಕ್ಷಣಮ್ । ಜಾಗ್ರತ್‌ಸ್ವಪ್ನಭ್ರಮಾಭ್ಯಾಂ ತದ್ಧೇತುನಿದ್ರಾಶಬ್ದಿತಾವಿದ್ಯಯಾ ಚ ಯುತೌ ಬದ್ಧೌ ತದುಭಯಬಂಧನಿಯಾಮಕಾವಾದ್ಯೌ ವಿಶ್ವತೈಜಸೌ । ಪ್ರಾಜ್ಞಸ್ತು ಅಸ್ವಪ್ನನಿದ್ರಯಾ ದ್ವಿವಿಧಭ್ರಮವಿನಾಕೃತಕೇವಲಾವಿದ್ಯಯಾ ಯುಕ್ತಸ್ತನ್ಮಾತ್ರಬಂಧ-ಸ್ವಾಮೀತ್ಯರ್ಥಃ । ನಿಶ್ಚಿತಾಃ ಸಮ್ಯಕ್ ನಿಶ್ಚಯವಂತಃ । ನ ನಿದ್ರಾಂ ನಿದ್ರಾಕೃತಬಂಧ-ಸ್ವಾಮಿತ್ವಮ್ । ಸ್ವಪ್ನಂ ದ್ವಿವಿಧಭ್ರಮಹೇತುತ್ವಂ ನೈವ ತುರ್ಯೇ ರೂಪೇ ಪಶ್ಯಂತಿ ಜಾನಂತೀತ್ಯರ್ಥಃ ॥ ೬ ॥

***ಅನುವಾದ*** *- ಮತ್ತೊಂದು ರೀತಿಯಾಗಿ ಸಾಧರ್ಮ್ಯ ವೈಧರ್ಮ್ಯಗಳನ್ನು ನಿರೂಪಿಸುತ್ತದೆ - ವಿಶ್ವ ಮತ್ತು ತೈಜಸರು ಜಾಗ್ರತ್ - ಸ್ವಪ್ನಭ್ರಮೆಗಳಿಗೆ ಹಾಗೂ ಅವುಗಳಿಗೆ ಕಾರಣವಾದ ಅವಿದ್ಯೆಗೆ ನಿಯಾಮಕರಾಗಿರುವರು. ಪ್ರಾಜ್ಞನು ಅವಿದ್ಯೆಯ ಬಂಧಕ್ಕಷ್ಟೆ ನಿಯಾಮಕನಾಗಿರುವನು. ಜ್ಞಾನಿಗಳು ತುರೀಯ ರೂಪವನ್ನು ಅವಿದ್ಯೆಯ ಬಂಧನಕ್ಕಾಗಲಿ ಸ್ವಪ್ನಗಳ ಭ್ರಮೆಗಳಿಗಾಗಲೀ ನಿಯಾಮಕವೆಂದು ತಿಳಿಯುವುದಿಲ್ಲ.*

ಉಪನಿಷತ್

ತುರೀಯ ರೂಪದ ಸಾಕ್ಷಾತ್ಕಾರ ಹೇಗೆ

ಅನ್ಯಥಾಗೃಹ್ಣತಃ ಸ್ವಪ್ನೋ ನಿದ್ರಾತತ್ತ್ವಮಜಾನತಃ ।
ವಿಪರ್ಯಾಸೇ ತಯೋಃ ಕ್ಷೀಣೇ ತುರೀಯಂ ಪದಮಶ್ನುತೇ ॥ ೭ ॥

ಭಾಷ್ಯಂ

ವಿಪರೀತಜ್ಞಾನಾದಪಿ ವಿಪರೀತಜ್ಞಾನಾಂತರಂ ಜಾಯತೇ ।

***ಅನುವಾದ*** *- 'ಅನ್ಯಥಾಗೃಹ್ಣತಃ ಸ್ವಪ್ನಃ' ಎಂದರೆ ಎಚ್ಚರಾವಸ್ಥೆಯಲ್ಲಿ 'ಇದು ತನ್ನದು' ಎಂಬ ಸ್ವಾತಂತ್ರ್ಯ ಭ್ರಮೆಯಿಂದಾಗಿ ಸ್ವಪ್ನದಲ್ಲಿಯೂ 'ಇದು*

*ಎಚ್ಚರಾವಸ್ಥೆಯ ನನ್ನ ಪದಾರ್ಥ' ಎಂಬ ಭ್ರಮೆ ಉಂಟಾಗುತ್ತದೆ, ಹೀಗೆ ಒಂದು ಅನ್ಯಥಾಜ್ಞಾನದಿಂದ ಮತ್ತೊಂದು ಅನ್ಯಥಾಜ್ಞಾನವೂ ಹುಟ್ಟಿಕೊಳ್ಳುತ್ತದೆ ಎಂದರ್ಥ ॥ ೭ ॥*

ಖಂಡಾರ್ಥಃ

ಏವಂವಿಧತುರೀಯರೂಪಸ್ಯ ದರ್ಶನಪ್ರಾಪ್ತೀ ಕದಾ ಭವೇತಾಮಿತ್ಯತ ಆಹ - ಅನ್ಯಥೇತಿ ।

ಅನ್ಯಥಾ ಗೃಹ್ಣತಃ ದೇಹಗೇಹಾದೌ ಭಗವದಧೀನೇ ಸ್ವಾಧೀನತಾಂ ಜಾನತಃ ಸ್ವಪ್ನೋ ಭವತಿ । ಸ್ವಪ್ನಪದೇನ ಮಿಥ್ಯಾಜ್ಞಾನರೂಪಭ್ರಮಪರಂಪರಾಗ್ರಹಃ । ತತ್ತ್ವಂ ಭಗವತಃ ಸ್ವಾತಂತ್ರ್ಯಾದಿರೂಪಂ ತತ್ತ್ವಮಜಾನತೋ ನಿದ್ರಾ ಮೂಲಾವಿದ್ಯಾಬಂಧೋ ಭವತಿ । ತಯೋರ್ನಿದ್ರಾಭ್ರಮಯೋರ್ವಿಪರ್ಯಾಸ ಆವರ್ತನೇ ಕ್ಷೀಣೇ ಸತಿ ತುರೀಯಂ ಪದಂ ಚತುರ್ಥರೂಪಮಶ್ನುತೇ । ಸಾಕ್ಷಾತ್ಕಾರದ್ವಾರಾ ಪ್ರಾಪ್ನೋತೀತ್ಯರ್ಥಃ ॥ ೭ ॥

***ಅನುವಾದ*** *- ತುರೀಯನ ದರ್ಶನ ಮತ್ತು ಪ್ರಾಪ್ತಿ ಆಗುವ ಬಗೆಯನ್ನು ಹೇಳುತ್ತದೆ - ಶ್ರೀಹರಿಯ ಅಧೀನವಾದ ತನು-ಭವನಗಳನ್ನು ತನ್ನದೆಂದು ತಿಳಿಯುವವನಿಗೆ ಮೇಲಿಂದ ಮೇಲೆ ಭ್ರಮೆಗಳೂ, ಶ್ರೀಹರಿಯ ಸ್ವರೂಪವನ್ನು ಸರಿಯಾಗಿ ವಿವೇಚಿಸಿಕೊಳ್ಳದವನಿಗೆ ಮೂಲಾವಿದ್ಯೆಯ ಬಂಧನವೂ ಸಂಭವಿಸುವುದು. ಈ ಮಿಥ್ಯಾಜ್ಞಾನ ಮತ್ತು ಮೂಲಾವಿದ್ಯೆಯ ಬಂಧನಗಳ ಪುನರಾವೃತ್ತಿಯು ಕಡಿಮೆಯಾದಾಗ ತುರೀಯರೂಪ ಪ್ರಾಪ್ತಿಯಾಗುವುದು.*

ಉಪನಿಷತ್

ಭಗವತ್ಪ್ರಸಾದದಿಂದ ಸಾಕ್ಷಾತ್ಕಾರ

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ ೮ ॥**

ಭಾಷ್ಯಂ

ಅನಾದಿಮಾಯಯಾ ವಿಷ್ಣೋರಿಚ್ಛಯಾ ಸ್ವಾಪಿತೋ ಯದಾ ।
ತಯಾ ಪ್ರಬೋಧಮಾಯಾತಿ ತದಾ ವಿಷ್ಣುಂ ಪ್ರಪಶ್ಯತಿ ॥
ಇತಿ ಪ್ರಕಾಶಿಕಾಯಾಂ ।

***ಅನುವಾದ*** *— ಅನಾದಿಯಾದ ಶ್ರೀಹರಿಯ ಇಚ್ಛೆಯೇ ಮಾಯೆಯೆನಿಸಿದೆ. ಈ ಮಾಯೆಯಿಂದಲೇ ಜೀವಾತ್ಮನು ಸಂಸಾರದಲ್ಲಿ ಮುಳುಗಿದ್ದಾನೆ. ಶ್ರೀಹರಿಯ*

*ಅನುಗ್ರಹದಿಂದ ಜೀವನು ಗುರುಗಳ ಉಪದೇಶದ ಮೂಲಕ ತತ್ತ್ವಜ್ಞಾನವನ್ನು ಪಡೆದಾಗ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಳ್ಳುವನು ಎಂದು ಪ್ರಕಾಶಿಕಾ ಎಂಬ ಗ್ರಂಥದಲ್ಲಿದೆ.*

**ಖಂಡಾರ್ಥಃ**

ನಿದ್ರಾಭ್ರಮಯೋರಾವರ್ತನಕ್ಷಯಃ ಕೇನ ಸ್ಯಾತ್? ಯಸ್ಯ ಕ್ಷಯೇಣ ಭಗವದಪರೋಕ್ಷಧೀರಿತ್ಯತೋ ಭಗವತ್ಪ್ರಸಾದೇನೈವೇತ್ಯಾಹ - ಅನಾದೀತಿ ।

ಮಾಯಾಶಬ್ದೇನ ಭಗವದಿಚ್ಛಾ ತದಧೀನಾಽವಿದ್ಯಾ ಚ ಗೃಹ್ಯತೇ । ಅನಾದೀತಿ ತಂತ್ರಮ್ । ಅನಾದೇರ್ವಿಷ್ಣೋಃ ಅನಾದಿಮಾಯಯಾ ಸುಪ್ತಃ ಸ್ಥಾಪಿತಃ ಸಂಸಾರೇ ನಿವೇಶಿತೋ ಜೀವೋ ಯದಾಽನಾದಿಮಾಯಯಾ ಭಗವದಿಚ್ಛಯಾ ಭಗವತ್ಪ್ರಸಾದೇನ ಪ್ರಬುದ್ಧ್ಯತೇ, ಭಗವಾನೇವ ಸ್ವತಂತ್ರೋಽನ್ಯತ್ಸರ್ವಂ ತದಧೀನಮಿತ್ಯಾದಿತತ್ತ್ವಜ್ಞಾನವಾನ್ ಭವತಿ ತದಾ ಅಜಂ ಜನನಾದಿದೋಷರಹಿತಮನಿದ್ರಮಸ್ವಪ್ನಂ ವಿಶ್ವಾದಿರೂಪತ್ರಯವ್ಯಾಪಾರಾಪ್ರವರ್ತಕಮ್, ಅದ್ವೈತಂ ಮಿಥ್ಯಾಜ್ಞಾನನಿವರ್ತಕಮ್, ಉಪಲಕ್ಷಣಂ, ಸರ್ವಾನಿಷ್ಟನಿವರ್ತಕಂ ಭಗವಂತಂ ಬುದ್ಧ್ಯತೇ ಸಾಕ್ಷಾತ್ಕರೋತೀತ್ಯರ್ಥಃ ॥ ೮ ॥

*ಅನುವಾದ - ಅವಿದ್ಯಾ ಹಾಗೂ ಭ್ರಮೆಯ ಪುನರಾವೃತ್ತಿಯ ನಾಶ ಮತ್ತು ಭಗವದಪರೋಕ್ಷ ಈ ಎರಡೂ ಭಗವತ್ಪ್ರಸಾದದಿಂದಲೇ ಎಂದು ಸಾರುವುದು —*

*ಭಗವದಿಚ್ಛೆಯಿಂದ ತದಧೀನವಾದ ಅವಿದ್ಯೆಯಿಂದಲೂ ಸಂಸಾರದಲ್ಲಿ ಸಿಲುಕಿದ ಜೀವನು ಭಗವದನುಗ್ರಹದಿಂದ ಯಾವಾಗ 'ಭಗವಂತನೊಬ್ಬನೇ ಸ್ವತಂತ್ರನು. ಉಳಿದೆಲ್ಲವು ಅಸ್ವತಂತ್ರ' ಎಂದು ಮೊದಲಾದ ತತ್ತ್ವಜ್ಞಾನವನ್ನು ಪಡೆಯುವನೋ, ಆಗ, ಜನನಾದಿದೋಷರಹಿತನೂ ವಿಶ್ವತೈಜಸಪ್ರಾಜ್ಞರ ವ್ಯಾಪಾರಗಳನ್ನು ಮಾಡದಿರುವವನೂ ಮಿಥ್ಯಾಜ್ಞಾನವನ್ನು ಪರಿಹರಿಸುವವನೂ ಆದ ತುರೀಯನನ್ನು ಕಾಣುವನು.*

**ಉಪನಿಷತ್**

ಪ್ರಪಂಚೋಽಯದಿವಿದ್ಯೇತ ಐಕ್ಯಬೋಧಕವಲ್ಲ.

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ ॥ ೯ ॥**

ಭಾಷ್ಯಂ

ತನ್ಮಾ ಸ್ವಸ್ವಾಮಿಸಂಬಂಧಃ ಪ್ರಪಂಚೋಽಸ್ಯ ಶರೀರಿಣಃ ।
ವಸ್ತುತೋಽಸೌ ನಚೈವಾಸ್ತಿ ಪರಮಸ್ಯ ವಶೇ ಯತಃ ॥
ತನ್ಮಾದಿಕಸ್ತಥಾಪ್ಯೇಷ ಹ್ಯಭಿಮಾನಾತ್ ಪ್ರದೃಶ್ಯತೇ ।
ಅತಃ ಸ ವಿದ್ಯತ ಇತಿ ಹ್ಯಂಗೀಕಾರೋ ಭವೇದ್ಯದಿ ।
ತಥಾಪಿ ಭಗವಜ್ಞಾನಾತ್ ಸ ನಿವರ್ತೇದಸಂಶಯಃ ॥

ಇತಿ ಬ್ರಹ್ಮತರ್ಕೇ ।

ಅದ್ವೈತಮನನ್ಯಥಾ ಜ್ಞಾತಂ । ಪರಬ್ರಹ್ಮಾದಿವಸ್ತು ತತ್ । ದ್ವೈತಂ ದ್ವಿಧಾ ಜ್ಞಾತಂ ಅನ್ಯಥಾ ಜ್ಞಾತಂ ಅಜ್ಞೈಃ । ಪರಮಾರ್ಥತಃ ಪರಮೇಶ್ವರಾತ್ । ತಸ್ಯೈವ ಮಾಯಾಮಾತ್ರಂ ತದಿಚ್ಛಯಾ ನಿರ್ಮಿತಂ । ತದನ್ಯಥಾಜ್ಞಾನಂ ತಸ್ಮಾತ್ ತದಿಚ್ಛಯೈವ ನಿವರ್ತತೇ ।

ಪರೇಣ ಬ್ರಹ್ಮಣಾ ಯತ್ತು ದ್ವಿಧಾ ನ ಜ್ಞಾತಮಂಜಸಾ ।
ತದದ್ವೈತಂ ಪರಂ ಬ್ರಹ್ಮ ತದೇವ ಜ್ಞಾತಮನ್ಯಥಾ ।
ಜೀವೇನ ದ್ವೈತಮುದ್ದಿಷ್ಟಂ ಮಿಥ್ಯಾಜ್ಞಾನಂ ತದೇವ ಚ ।
ಪರಮಾರ್ಥಾತ್ ಪರಾದ್ ವಿಷ್ಣೋರ್ಜಾತಮಿಚ್ಛಾವಶಾದನು ।
ಮಾಯೇತೀಚ್ಛಾ ಸಮುದ್ದಿಷ್ಟಾ ಮಾಯಾಮಾತ್ರಂ ತದುದ್ಭವಂ ।
ಉತ್ತಮತ್ವಾತ್ ಪರಾರ್ಥೋಽಸೌ ಭಗವಾನ್ ವಿಷ್ಣುರವ್ಯಯಃ ॥ ಇತಿ ಚ ।

*ಅನುವಾದ — ಶರೀರವೇ ಮೊದಲಾದವು ಸರ್ವಸ್ವಾಮಿಯಾದ ಶ್ರೀಹರಿಯ ಅಧೀನವಾದವು. ಆದುದರಿಂದ 'ಪ್ರಪಂಚ' ಎನಿಸುವ ಶರೀರಾದಿಗಳ ಒಡೆತನವು ಜೀವಾತ್ಮನಿಗೆ ವಾಸ್ತವವಾಗಿ ಇಲ್ಲ, ಆದರೂ ತಾನು ಸ್ವತಂತ್ರನೆಂಬ ಭ್ರಾಂತಿಯಿಂದಾಗಿ ಶರೀರಾದಿಗಳ ಒಡೆತನವಿದ್ದಂತೆ ಕಾಣುವುದು. ಆದುದರಿಂದ ಆ ಒಡೆತನ ವಾಸ್ತವ ಎಂದು ಭ್ರಾಂತಿಉಂಟಾದರೂ ಅದು ಭಗವಂತನ ಜ್ಞಾನದಿಂದ ನಿಶ್ಚಯವಾಗಿ ಪರಿಹಾರವಾಗುವುದು— ಎಂದು ಬ್ರಹ್ಮತರ್ಕವು 'ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ' ಎಂಬ ವಾಕ್ಯವನ್ನು ವ್ಯಾಖ್ಯಾನಿಸಿದೆ.*

*ಅದ್ವೈತ ಎಂದರೆ ದ್ವೈತವಲ್ಲದುದು, ಅನ್ಯಥಾ ತಿಳಿಯಲ್ಪಡದಿದ್ದುದು. ಅರ್ಥಾತ್ ಸರಿಯಾಗಿಯೇ ತಿಳಿಯಲ್ಪಡುವ ವಸ್ತು. ಹೀಗೆ ಜ್ಞಾನಿಗಳಿಂದ*

ಸರಿಯಾಗಿ ತಿಳಿಯಲ್ಪಟ್ಟ ಪರಬ್ರಹ್ಮಾದಿ ವಸ್ತುಗಳು ಅದ್ವೈತವೆನಿಸುತ್ತವೆ. ಇವು ಪರಮಾತ್ಮನಪ್ರೇರಣೆಯಿಂದಲೇ ಅಜ್ಞಾನಿಗಳಿಂದ ಅನ್ಯಥಾ ತಿಳಿಯಲ್ಪಟ್ಟಿವೆ. ಆದ್ದರಿಂದ ದ್ವೈತವೆಂದರೂ ಇವುಗಳೇ. ಪರಮಾರ್ಥತಃ ಅಂದರೆ ಪರಮಾತ್ಮನಿಂದ. ಮಾಯಾಮಾತ್ರಂ ಅಂದರೆ ಭಗವಂತನ ಇಚ್ಛೆಯಿಂದ ಉಂಟಾದುದು. ಹೀಗೆ 'ಮಾಯಾಮಾತ್ರಂ ಇದಂ ದ್ವೈತಂ ಅದ್ವೈತಂ ಪರಮಾರ್ಥತಃ' ಅಂದರ ಭಗವಂತನ ಇಚ್ಛೆಯಿಂದಲೇ ಉಂಟಾದ ಈ ಅನ್ಯಥಾಜ್ಞಾನವು ಆವನ ಇಚ್ಛೆಯಿಂದಲೇ ನಿವೃತ್ತಿ ಹೊಂದುವುದು ಎಂದರ್ಥ.

ತನ್ನ ಅನುಗ್ರಹದಿಂದಾಗಿ ಜ್ಞಾನಿಗಳಿಂದ ಅನ್ಯಥಾ ತಿಳಿಯಲ್ಪಡದಿರುವ ಪ್ರಯುಕ್ತ ಪರಬ್ರಹ್ಮನು ಅದ್ವೈತನೆನಿಸಿದ್ದಾನೆ. ಆ ಪರಬ್ರಹ್ಮನೇ ಜೀವಾತ್ಮರಿಂದ ಅನ್ಯಥಾ ತಿಳಿಯಲ್ಪಡುವವನಾದ್ದರಿಂದ ದ್ವೈತನೆನಿಸಿದ್ದಾನೆ. ಈ ಅನ್ಯಥಾ ಜ್ಞಾನವು ಜೀವಾತ್ಮನಿಗೆ ಭಗವದಿಚ್ಛೆಗೆ ಅನುಗುಣವಾಗಿ ಹುಟ್ಟಿಕೊಂಡಿದೆ. ಆದ್ದರಿಂದ ಆವನ ಇಚ್ಛೆಯಿಂದಲೇ ನಿವೃತ್ತಿ ಹೊಂದುತ್ತದೆ. ಮಾಯೆ ಎಂದರೆ ಭಗವದಿಚ್ಛೆ. ಇದರಿಂದ ಉಂಟಾದ ಪ್ರಯುಕ್ತ ಅನ್ಯಥಾಜ್ಞಾನವು ಮಾಯಾಮಾತ್ರವೆನಿಸಿದೆ. ಪರಮಾರ್ಥವೆಂದರೆ ಶ್ರೀವಿಷ್ಣುವು. ಆವನು ಸರ್ವೋತ್ತಮನಾದುದರಿಂದ ಪರಮಾರ್ಥನೆನಿಸಿರುವನು ಎಂಬುದಾಗಿ 'ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ' ಎಂಬ ಮಂತ್ರವನ್ನು ಬ್ರಹ್ಮತರ್ಕ ವ್ಯಾಖ್ಯಾನಿಸಿದೆ ॥೬॥

## ಖಂಡಾರ್ಥಃ

ನನು ದೇಹಗೇಹಾದೌ ಸ್ವಸ್ವಾಮಿಸಂಬಂಧಾದಿರೂಪಬಂಧಸ್ಯ ಜೀವಸ್ವರೂಪಸ್ಯೇವ ಸ್ವಾಭಾವಿಕತ್ವೇನ ನಿವೃತ್ತ್ಯಯೋಗಾತ್ 'ವಿಪರ್ಯಾಸೇ ತಯೋಃ ಕ್ಷೀಣೇ' ಇತ್ಯುಕ್ತಿಃ ಕಥಮಿತ್ಯತೋ ನಾಯಂ ಸ್ವಾಭಾವಿಕ ಇತ್ಯಾಹ - ಪ್ರಪಂಚ ಇತಿ ।

ದೇಹಗೇಹಾದೌ ಸ್ವಸ್ವಾಮಿಸಂಬಂಧಾದಿರೂಪೋ ಬಂಧಃ ಪ್ರಪಂಚಃ ಸ್ವಾತಂತ್ರ್ಯೇಣ ನಾಸ್ತ್ಯೇವ । ಯದಿ ಪರಾಧೀನೋಽಪಿ ವಿದ್ಯೇತ ವಿದ್ಯತ ಇತ್ಯಂಗೀಕ್ರಿಯೇತ ತರ್ಹ್ಯಪಿ ಪರಮಾರ್ಥತಃ ಪರಮಶ್ಚಾಸಾವರ್ಥಶ್ಚ ಪರಮಾರ್ಥಃ, ಉತ್ತಮೋಽರ್ಥೋ ಭಗವಾನ್, ತಸ್ಮಾತ್ ಪರಮಾರ್ಥತಃ ಪರಮೇಶ್ವರಪ್ರಸಾದಾದಿತಿ ಯಾವತ್, ನಿವರ್ತೇತ ನಿವರ್ತತ ಏವ ನ ಸಂಶಯಃ । ಅನಾದಿತೋಽನುವೃತ್ತಸ್ಯ ದೇಹಾದೌ ಸ್ವೀಯತ್ವಜ್ಞಾನರೂಪಭ್ರಮಸ್ಯ ಕಥಂ ನಿವೃತ್ತಿರಿತ್ಯತ ಆಹ - ಮಾಯೇತ್ಯಾದಿನಾ । ಅದ್ವೈತಂ, ಮಹದ್ಭಿರ್ಯಥಾವತ್ತಯಾ ಜ್ಞಾತಂ ಬ್ರಹ್ಮಾದಿ ವಸ್ತುಜಾತಮದ್ವೈತಮ್ । ಅಜ್ಞೈರ್ದ್ವೈತಂ ದ್ವಿತೀಯೇನ ಪ್ರಕಾರೇಣ ಜ್ಞಾತಂ ತದ್ವೈಪರೀತ್ಯೇನ ಜ್ಞಾತಮ್ । ತಚ್ಚ ಮಿಥ್ಯಾಜ್ಞಾನಂ, ತೇಷಾಂ ಮಾಯಾಮಾತ್ರಂ

ಮಾಯಯಾ ಭಗವದಿಚ್ಛಯಾ ಮಾತ್ರಂ ನಿರ್ಮಿತಂ ಜಾತಮಿತ್ಯರ್ಥಃ । ತಥಾ ಚ ತಾದೃಶಮಿಥ್ಯಾಜ್ಞಾನಸ್ಯಾನಾದಿತೋಽನುವೃತ್ತಸ್ಯಾಪೀಶ್ವರೇಚ್ಛಯಾ ಜಾತತ್ವೇನಾಸ್ವಾಭಾವಿಕತ್ವಾತ್ ತತ್ಪ್ರಸಾದೇನ ತನ್ನಿವೃತ್ತಿರ್ಯುಕ್ತೇತಿ ಭಾವಃ ॥ ೯ ॥

*ಅನುವಾದ - ಜೀವರಿಗೆ ತನುಭವನಗಳಲ್ಲಿರುವ ಸ್ವಸ್ವಾಮಿಭಾವ ಸಂಬಂಧರೂಪಬಂಧವು ಸ್ವಾಭಾವಿಕ ಅದು ಹೋಗುವುದಿಲ್ಲ. ಅಂದ ಮೇಲೆ ಅವಿದ್ಯೆ ಭ್ರಾಂತಿ ಕಡಿಮೆಯಾದಾಗ ಎನ್ನುವ ಮಾತು ಹೇಗೆ ಎನ್ನುವ ಪ್ರಶ್ನೆಗೆ ನೀವು ತಿಳಿದಂತೆ ಈ ಬಂಧ ಸ್ವಾಭಾವಿಕ ಅಲ್ಲ ಎಂದು ಉತ್ತರಿಸುವುದು-*

*ಭಗವದಧೀನಗಳಾದ ದೇಹ-ಮನೆ ಮೊದಲಾದವುಗಳ ಮೇಲೆ ಒಡೆತನ ಜೀವಾತ್ಮನಿಗೆ ಸ್ವತಂತ್ರವಾಗಿ ಇಲ್ಲ. ಭ್ರಮೆಯಿಂದಾಗಿ ಬಂದಿದ್ದರೂ ಅದು ಭಗವಂತನ ಜ್ಞಾನದಿಂದ ನಿಶ್ಚಿತವಾಗಿ ನಾಶವಾಗುವುದು. ಮಹಾತ್ಮರಿಂದ ಯಥಾರ್ಥವಾಗಿಯೇ ತಿಳಿಯಲ್ಪಟ್ಟಿರುವ ಈ ಜಗತ್ತು ಅಜ್ಞರಿಂದ ವಿಪರೀತವಾಗಿ ತಿಳಿಯಲ್ಪಟ್ಟಿದೆ. ಇಂತಹ ಮಿಥ್ಯಾಜ್ಞಾನವು ಪುರುಷೋತ್ತಮನಿಂದಾಗಿ ಅವನ ಇಚ್ಛೆಯಿಂದಲೇ ಹುಟ್ಟಿರುವುದರಿಂದ ಅವನ ಅನುಗ್ರಹದಿಂದಲೇ ನಿವೃತ್ತಿ ಹೊಂದುವುದು ಅಶಕ್ಯವೇನಲ್ಲ.*

ಉಪನಿಷತ್

ಸಜ್ಜನರ ಸಿದ್ಧಾಂತ

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥ ೧೦ ॥**

ಭಾಷ್ಯ

ಅನನ್ಯಥಾ ಇತಂ ಅವಗತಂ ಅದ್ವೈತಂ । ದ್ವೈತಂ ವಸ್ತುಸ್ವರೂಪಾಪೇಕ್ಷಯಾ ದ್ವಿಧಾ ಹ್ಯನ್ಯಥಾಜ್ಞಾನಮಿತ್ಯರ್ಥಃ । ಅತೋ ವಿಕಲ್ಪಃ ಶರೀರಾದಿಸಂಬಂಧಃ ಕೇನಚಿತ್ ಅಜ್ಞಾನಾದಿನಾ ಕಾರಣೇನ ಕಲ್ಪಿತೋಽಪಿ ಉಪದೇಶಾತ್ ನಿವರ್ತತೇ । ಅಯಂ ಸತಾಂ ವಾದಃ - ಜ್ಞಾತೇ ಸತಿ ಪರಬ್ರಹ್ಮಣಿ ದ್ವೈತಮನ್ಯಥಾಜ್ಞಾನಂ ನಿವರ್ತತ ಇತಿ ।

ವಿಕಲ್ಪೋ ದೇಹಬಂಧಾದಿಃ ಕೇನಚಿತ್ ಕಾರಣೇನ ತು ।
ಕಲ್ಪಿತೋ ವಿನಿವರ್ತೇತ ಗುರುವಾಕ್ಯಾದಸಂಶಯಃ ।

ಏಷ ಏವ ಸತಾಂ ವಾದೋ ಜ್ಞಾತೇ ಬ್ರಹ್ಮಣಿ ತತ್ತ್ವತಃ ।
ನಿವರ್ತತೇಽನ್ಯಥಾಜ್ಞಾನಂ ತತ ಆನಂದಮೇತ್ಯಸೌ ॥ ಇತಿ ಚ ॥ ೧೦ ॥
ಇತಿ ದ್ವಿತೀಯಃ ಖಂಡಃ ।

*ಅನುವಾದ* — *ದ್ವಿ ಎಂದರೆ ಅನ್ಯಥಾ — ವಸ್ತುಸ್ಥಿತಿಗೆ ವಿಪರೀತವಾಗಿ, ಇತ ಎಂದರೆ ತಿಳಿಯಲ್ಪಟ್ಟಿದ್ದು. ಹೀಗೆ ದ್ವೀತ ಎಂದರೆ ಅನ್ಯಥಾ ತಿಳಿಯಲ್ಪಟ್ಟಿದ್ದು. ದ್ವೀತವೇ ದ್ವೈತ. ಅದ್ವೈತವೆಂದರೆ ಅನ್ಯಥಾ ತಿಳಿಯಲ್ಪಡದ - ಸರಿಯಾಗಿಯೇ ತಿಳಿಯಲ್ಪಟ್ಟ ವಸ್ತು.*

*ಆದುದರಿಂದ ಜೀವಾತ್ಮನಿಗೆ ಶರೀರಾದಿಗಳ ಒಡೆತಡನವು ಅಜ್ಞಾನಾದಿ ಕಾರಣದಿಂದ ಕಲ್ಪಿತವಾಗಿದ್ದು ಅಸ್ವಾಭಾವಿಕವಾಗಿರುವುದರಿಂದ ಜ್ಞಾನಿಗಳ ಉಪದೇಶದಿಂದ ಅದು ನಿವೃತ್ತಿ ಹೊಂದುವುದು. ಇದು ಸಜ್ಜನರ ಸಿದ್ಧಾಂತ - 'ಪರಬ್ರಹ್ಮನನ್ನು ತಿಳಿದಾಗ ಅನ್ಯಥಾ ಜ್ಞಾನವು ದೂರವಾಗುತ್ತದೆ.'*

*ಜೀವಾತ್ಮನಿಗೆ ದೇಹಾದಿಗಳ ಒಡೆತನವು ವಿಕಲ್ಪವೆನಿಸಿದೆ. ಆ ಒಡೆತನ ವಾಸ್ತವವಾಗಿ ಇಲ್ಲ. ಅಜ್ಞಾನಾದಿ ಕಾರಣಗಳಿಂದ ಕಲ್ಪಿಸಲ್ಪಟ್ಟಿದ್ದರೂ ಗುರುಗಳ ಉಪದೇಶದಿಂದ ಪರಿಹೃತವಾಗುವುದು; ಇದರಲ್ಲಿ ಸಂಶಯವಿಲ್ಲ. ಪರಬ್ರಹ್ಮನನ್ನು ತಾತ್ವಿಕವಾಗಿ ತಿಳಿದಲ್ಲಿ ಅನ್ಯಥಾಜ್ಞಾನವು ನಶಿಸುವುದು. ಬಳಿಕ ಜೀವಾತ್ಮನು ಮುಕ್ತಿಯನ್ನು ಪಡೆಯುವನು. ಇದೇ ಸಜ್ಜನರ ಸಿದ್ಧಾಂತವಾಗಿದೆ — ಹೀಗೆ ಬ್ರಹ್ಮ ತರ್ಕ 'ವಿಕಲ್ಪೋ ವಿನಿವರ್ತೇತ.... । ಇತ್ಯಾದಿ ಮಂತ್ರವನ್ನು ವ್ಯಾಖ್ಯಾನಿಸಿದೆ.*

ಖಂಡಾರ್ಥಃ

ಉಕ್ತಮೇವ ಪೂರ್ವವಾಕ್ಯಾರ್ಥಂ ವಿಶದಯನ್ನುಪಸಂಹರತಿ - ವಿಕಲ್ಪ ಇತಿ ।

ದೇಹಗೇಹಾದೌ ಸ್ವೀಯತಾಭಿಮಾನಾದಿನಾನಾತ್ಮಕಬಂಧರೂಪೋ ವಿಕಲ್ಪಃ ಉಕ್ತರೀತ್ಯಾ ಸ್ವಾಭಾವಿಕೋ ಯದಿ ಕೇನಚಿದಜ್ಞಾನಾದಿನಾ ಕಾರಣೇನ ಸ್ವಾಭಾವಿಕತ್ವೇನ ಕಲ್ಪಿತಃ, ತರ್ಹ್ಯಪಿ ಉಪದೇಶಾತ್ ಮಹತಾಮುಪದೇಶಬಲಾನ್ನಿವರ್ತೇತ ನಿವರ್ತತ ಏವ । ಕಃ ಸತಾಂ ವಾದಃ ? ಯದುಪದೇಶಾನ್ನಾನಾವಿಧಸ್ವಾತಂತ್ರ್ಯಾದಿಭ್ರಮನಿವೃತ್ತಿರಿತ್ಯತ ಆಹ - ಜ್ಞಾತ ಇತಿ । ಬ್ರಹ್ಮಣಿ ಯಥಾವತ್ತಯಾ ಜ್ಞಾತೇ ಸತಿ ದ್ವೈತಂ, ಶಿವಮದ್ವೈತ-ಮಿತ್ಯತ್ರೋಕ್ತವ್ಯುತ್ಪತ್ತ್ಯಾ ಮಿಥ್ಯಾಜ್ಞಾನಂ ನ ವಿದ್ಯತೇ, ನಿವರ್ತತ ಇತ್ಯಯಂ ಸತಾಂ ವಾದ ಇತ್ಯರ್ಥಃ । ಇತಿಶಬ್ದಸ್ಯ ಇತ್ಯೇತೇ ಶ್ಲೋಕಾ ಭವಂತೀತಿ ಪೂರ್ವೇಣಾನ್ವಯಃ । ತತ್ತ್ವನಿರ್ಣಯತಟ್ಟೀಕಯೋರನುವ್ಯಾಖ್ಯಾನಸುಧಯೋಶ್ಚೈತತ್ ಶ್ಲೋಕದ್ವಯಂ ಭೇದ-ಪಂಚಕಸ್ಯ ಸತ್ಯತ್ವಾನಾದಿತ್ವಯೋರುಪಪಾದನಪರತಯಾ ವ್ಯಾಖ್ಯಾತಮ್ ॥ ೧೦ ॥

**ಅನುವಾದ** - ಶರೀರಾದಿಗಳಲ್ಲಿ ತನ್ನದು ಎಂಬ ಅಭಿಮಾನ ಸ್ವಾಭಾವಿಕ, ಭಗವದಿಚ್ಛೆಯಿಂದಾದುದಲ್ಲ ಎಂದು ಅಜ್ಞಾನದಿಂದ ಕಲ್ಪಿಸಲ್ಪಟ್ಟರೂ, ಸಜ್ಜನರ ಉಪದೇಶದಿಂದ ಆ ಕಲ್ಪನೆ ದೂರವಾಗುವುದು. ಯಾವ ಉಪದೇಶದಿಂದ ನಾನು ನನ್ನದು ಎಂಬ ಭ್ರಮ ದೂರವಾಗುವುದೋ ಆ ಸಜ್ಜನರ ಸಿದ್ಧಾಂತ ಯಾವುದು? ಎನ್ನುವುದಕ್ಕೆ ಉತ್ತರಿಸುತ್ತದೆ - 'ಪರಬ್ರಹ್ಮನನ್ನು ಸರಿಯಾಗಿ ತಿಳಿದಾಗ ಮಿಥ್ಯಾಜ್ಞಾನವು ನಾಶವಾಗುವುದು, ಮುಕ್ತಿಯು ದೊರಕುವುದು' ಎಂಬುದೇ ಸಜ್ಜನರ ಉಪದೇಶವಾಗಿದೆ.

# ಅಥ ತೃತೀಯಃ ಖಂಡಃ ॥

ಉಪನಿಷತ್

ಅಕಾರವಾಚ್ಯ ವಿಶ್ವರೂಪ

**ಸೋऽಯಮಾತ್ಮಾऽಧ್ಯಕ್ಷರಮೋಂಕಾರೋऽಧಿಮಾತ್ರಂ ಪಾದಾ ಮಾತ್ರಾ ಅಕಾರ ಉಕಾರ ಮಕಾರ ಇತಿ । ಜಾಗರಿತಸ್ಥಾನೋ ವೈಶ್ವಾನರೋऽಕಾರಃ ಪ್ರಥಮಾ ಮಾತ್ರಾ । ಆಪ್ತೇರಾದಿಮತ್ವಾದ್ವಾ । ಆಪ್ನೋತಿ ಹ ವೈ ಸರ್ವಾನ್ ಕಾಮಾನ್ ಆದಿಶ್ಚ ಭವತಿ ಯ ಏವಂ ವೇದ ॥ ೧ ॥**

ಭಾಷ್ಯಂ

ಅಧಿಕಂ ಸರ್ವತಃ ಅವಿನಾಶಿ ಚ ಇತಿ ಅಧ್ಯಕ್ಷರಂ । ಅಧಿಕಾ ಏವ ಮಾತ್ರಾ ಅಂಶಾ ಯಸ್ಯ ತದಧಿಮಾತ್ರಂ । ಅ ಇತ್ಯನೇನ ಅಭಿಧಾನೇನ ಆಕ್ರಿಯತೇ ಇತಿ ಅಕಾರಃ । ತತ್ರ ಪೂರ್ವೋಕ್ತೋ ವೈಶ್ವಾನರಃ ಪ್ರಥಮಾ ಮಾತ್ರೇತ್ಯಾದಿ ಅನುವಾದಃ। ಅಕಾರ ಇತ್ಯಾದಿಕಂ ವಿಧೇಯಂ ।

ಪ್ರಾಜ್ಞಃ ತೈಜಸಶ್ಚ ಆದಿರಸ್ಯೇತಿ ಆದಿಮಾನ್ । ಸುಪ್ತೇರುತ್ಥಾನೇ ಪ್ರಾಜ್ಞಾದ್ ವಿಭಕ್ತೋ ಭವತಿ ವಿಶ್ವಃ । ಸ್ವಪ್ನಾದುತ್ಥಾನೇ ತೈಜಸಾತ್ । ಆದಿಶ್ಚಾಸ್ಯ ಉಪಾಸಕಸ್ಯ ಭವತಿ ।

*ಅನುವಾದ — ಎಲ್ಲರಿಗಿಂತಲೂ ಉತ್ತಮನೂ ಅವಿನಾಶಿಯೂ ಆಗಿರುವುದರಿಂದ ವಿಶ್ವಾದಿ ಅಂಶಗಳುಳ್ಳ ಪರಮಾತ್ಮನು 'ಅಧ್ಯಕ್ಷರ' ಎನಿಸಿರುವನು. ಅವನ ಅಂಶಗಳೂ ಪೂರ್ಣವಾಗಿರುವುದರಿಂದ 'ಅಧಿಮಾತ್ರ' ಎನಿಸಿರುವನು. ಉಪನಿಷತ್ತಿನಲ್ಲಿ ಅಕಾರಃ ಎಂದರೆ ಅ ಎಂಬ ಹೆಸರಿನಿಂದ ಕರೆಯಲ್ಪಡುವವನು ಎಂದರ್ಥ. ಈ ಮಂತ್ರಗಳಲ್ಲಿ 'ಚಕ್ಷುಸ್ಸಿನಲ್ಲಿರುವ ವೈಶ್ವಾನರನು ಮೊದಲ ಅಂಶ' ಎಂದು ಮುಂತಾಗಿ ಮೊದಲೇ ಹೇಳಿದ್ದನ್ನು ಅನುವಾದಿಸಿ, 'ಅಂತಹ ವೈಶ್ವಾನರನು ಅವರ್ಣದಿಂದ ಕರೆಯಲ್ಪಡುವವನು' ಎಂದು ಮುಂತಾಗಿ ವಿಧಿಸಲಾಗಿದೆ.*

*ಪ್ರಾಜ್ಞನೂ ತೈಜಸನೂ ವಿಶ್ವನ ಅಭಿವ್ಯಕ್ತಿಗೆ ಆದಿಯಾಗಿರುವುದರಿಂದ (ಕಾರಣನಾಗಿರುವುದರಿಂದ) ವಿಶ್ವನು ಆದಿಮಾನ್ ಎನಿಸಿರುವನು - ನಿದ್ರಾವಸ್ಥೆಯಲ್ಲಿ ಪ್ರಾಜ್ಞನಲ್ಲಿ ಐಕ್ಯ ಹೊಂದಿರುವ ವಿಶ್ವನು, ಜೀವನು ನಿದ್ರೆಯಿಂದ ಏಳುವ ಸಮಯದಲ್ಲಿ ಪ್ರಾಜ್ಞನಿಂದ ಪ್ರತ್ಯೇಕನಾಗುವನು. ಆದರಂತೆ ಜೀವನ*

*ಸ್ವಪ್ನಕಾಲದಲ್ಲಿ ತೈಜಸನಲ್ಲಿ ಐಕ್ಯ ಹೊಂದುವ ವಿಶ್ವನು, ಸ್ವಪ್ನದಿಂದ ಎಚ್ಚರವಾದಾಗ ತೈಜಸನಿಂದ ಪ್ರತ್ಯೇಕನಾಗುವನು. ಹೀಗೆ ವಿಶ್ವನ ಅಭಿವ್ಯಕ್ತಿಗೆ ಪ್ರಾಜ್ಞ ತೈಜಸರು ಕಾರಣರಾಗಿರುವರು.*

*ಉಪನಿಷತ್ತಿನಲ್ಲಿ 'ವಿಶ್ವನು ಅವರ್ಣವಾಚ್ಯನು' ಎಂದು ತಿಳಿದವನು ಆದಿಯಾಗುತ್ತಾನೆ - ಆದಿಶ್ಚ ಭವತಿ ಯ ಏವಂ ವೇದ' ಎಂದಿದೆ. ಇದಕ್ಕೆ ಆಪಾತತಃ ಕಾಣುವಂತೆ ಉಪಾಸಕನೇ ಆದಿಯಾಗುವನೆಂದು ಅರ್ಥವಲ್ಲ. ಬದಲಾಗಿ ಉಪಾಸಕನಿಗೆ ವಿಶ್ವನು ಆದಿಯಾಗುವನು ಮುಕ್ತಿಗೆ ಕಾರಣನಾಗುವನು ಎಂದು ಅರ್ಥ.*

ಖಂಡಾರ್ಥಃ

ಏವಂ ಸಮಗ್ರೋಂಕಾರಪ್ರತಿಪಾದ್ಯಸ್ಯಾತ್ಮನೋ ವಿಶ್ವಾದಿರೂಪಚತುಷ್ಟಯಂ ನಿರೂಪ್ಯ ತೇಷಾಂ ರೂಪಾಣಾಮಕಾರಾದಿಪ್ರಣವಾಂಶಪ್ರತಿಪಾದ್ಯತ್ವಾದಿಮಾಹಾತ್ಮ್ಯಂ ವಕ್ತುಂ ಉಕ್ತಮನುವದತಿ - ಸೋಽಯಮಾತ್ಮಾಽಧ್ಯಕ್ಷರಮೋಂಕಾರ ಇತಿ ।

ಓಮಿತ್ಯಾಕ್ರಿಯಮಾಣತಯೋಂಕಾರಶಬ್ದಿತಃ ಸೋಽಯಂ ಚತುರಾತ್ಮಕತ್ವೇನೋಕ್ತ ಆತ್ಮಾಧ್ಯಕ್ಷರಮ್ । ಅಧಿ ಸರ್ವತೋಽಧಿಕಂ ಚ ತದಕ್ಷರಮವಿನಾಶಿ ಚೇತ್ಯಧ್ಯಕ್ಷರಮ್ । ಶಬ್ದಸ್ವಾಭಾವ್ಯಾನ್ನಪುಂಸಕತಾ । ಕೀದೃಶಮಕ್ಷರಮಿತ್ಯತ ಆಹ - ಅಧಿಮಾತ್ರಮಿತಿ । ಅಧಿಕಾ ಮಾತ್ರಾ ಅಂಶಾ ಯಸ್ಯ ತದಕ್ಷರಮಧಿಮಾತ್ರಮ್ । ಮಾತ್ರಾಃ ಕಾ ಇತ್ಯತ ಆಹ - ಪಾದಾ ಮಾತ್ರಾ ಇತಿ । ಪದ್ಯಂತ ಇತಿ ಪಾದಾಃ ವಿಶ್ವಾದಿರೂಪಾಣಿ । ಪಾದಾಃ ಕ ಇತ್ಯತ ಅಕಾರಾದಿಪ್ರತಿಪಾದ್ಯಾ ವಿಶ್ವಾದಯ ಇತ್ಯಾಹ - ಅಕಾರ ಇತಿ । ಅ ಇತ್ಯಾಕ್ರಿಯತೇ ಆಹೂಯತೇ ಪ್ರತಿಪಾದ್ಯತ ಇತ್ಯಕಾರೋ ವಿಶ್ವಃ । ಏವಮುಕ್ತದಿಶಾ ಉಕಾರಸ್ತೈಜಸಃ । ಮಕಾರಃ ಪ್ರಾಜ್ಞಃ । ಉಪಲಕ್ಷಣಮಿದಮ್ । ನಾದಬೋಧ್ಯಸ್ತುರೀಯೋಽಪಿ ನಾದ ಇತಿ ಶೇಷೋಕ್ತ್ಯಾ ಗ್ರಾಹ್ಯಃ । ಅವರ್ಣಪ್ರತಿಪಾದ್ಯಂ ರೂಪಂ ಸ್ಥಾನೋಕ್ತ್ಯಾ ನಿರ್ದಿಶತಿ - ಜಾಗರಿತೇತಿ । ಅಕಾರಃ ಅ ಇತ್ಯಾಕ್ರಿಯಮಾಣಃ ಪ್ರಥಮಾ ಮಾತ್ರಾ ಸಮಗ್ರಪ್ರಣವಪ್ರತಿಪಾದ್ಯಸ್ಯಾಕ್ಷರನಾಮ್ನಃ ಆತ್ಮನಃ ಪ್ರಥಮೋಂಽಶ ಇತ್ಯರ್ಥಃ । ಅತ್ರ ಜಾಗರಿತಸ್ಥಾನಃ ಪ್ರಥಮಾ ಮಾತ್ರಾ ವೈಶ್ವಾನರ ಇತ್ಯನೂದ್ಯ ಅಕಾರ ಇತ್ಯವರ್ಣಪ್ರತಿಪಾದ್ಯತ್ವಂ ವಿಧೀಯತ ಇತಿ ನ ಪೌನರುಕ್ತ್ಯಮಿತಿ ಬೋಧ್ಯಮ್ । ಏವಮಗ್ರೇಽಪಿ । ವೈಶ್ವಾನರಸ್ಯಾವರ್ಣವಾಚ್ಯತ್ವೇ ನಿಮಿತ್ತದ್ವಯಮಾಹ - ಆಪ್ತೇರಾದಿಮತ್ತ್ವಾದ್ವೇತಿ । ತತ್ತಜ್ಜೀವಯೋಗ್ಯಭೋಗ್ಯವಿಷಯಾನ್ ಭೋಗಾನ್ ಆಪಯತಿ ಪ್ರಾಪಯತಿ ವಿಶ್ವ ಇತಿ 'ಅ' ಇತ್ಯುಚ್ಯತೇ ವಿಶ್ವ ಇತ್ಯರ್ಥಃ । 'ಆಪ್ಲೃ ವ್ಯಾಪ್ತೌ' ಅಂತರ್ಣೀತಣ್ಯರ್ಥಾಡ್ಡಪ್ರತ್ಯಯೇ ಅ ಇತಿ ರೂಪಮಿತಿ ಭಾವಃ । ಪ್ರಾಜ್ಞಸ್ತೈಜಸಸ್ಯಾಽದೀ

ಅಸ್ಯೇತಿ ಆದಿಮಾನ್, ತಸ್ಮಾದ್ವಾ ಅ ಇತ್ಯುಚ್ಯತ ಇತ್ಯರ್ಥಃ । ಸುಷುಪ್ತೌ ಸ್ವಪ್ನೇ ಚ ಪ್ರಾಜ್ಞತೈಜಸಾಭ್ಯಾಮೇಕೀಭೂತೋ ವಿಶ್ವಃ ಸುಪ್ತೇರುತ್ಥಾನೇ ಪ್ರಾಜ್ಞಾತ್, ಸ್ವಪ್ನಾದುತ್ಥಾನೇ ತೈಜಸಾದ್ವಿವಿಕ್ತಸ್ಸನ್ ದಕ್ಷಿಣಾಕ್ಷಿಸ್ಥಾನಮಾಯಾತೀತಿ ತಯೋರಾದಿತಯಾ ವಿಶ್ವಸ್ಯ ತದಾದಿತ್ವಮಿತಿ ಭಾವಃ । ಏತನ್ನಿಮಿತ್ತದ್ವಯಯುಕ್ತತ್ವೇನಾವರ್ಣವಾಚ್ಯತ್ವಂ ವಿಶ್ವಸ್ಯ ಜಾನತಃ ಫಲಮಾಹ - ಆಪ್ನೋತಿ ಹ ವಾ ಇತಿ । ಯೋಽಧಿಕಾರೀ ಏವಮಕಾರವಾಚ್ಯತ್ವಂ ವಿಶ್ವಸ್ಯ ವೇದ, ಅಸ್ಯೇತಿ ಶೇಷಃ, ಅಸ್ಯ ವೇದಿತುಃ ಸ ವಿಶ್ವಃ ಸರ್ವಾನ್ ಸ್ವಯೋಗ್ಯಾನ್ ಸರ್ವಾನ್ ಕಾಮಾನ್ ಕಾಮ್ಯಮಾನಾನಾಪ್ನೋತಿ ಪ್ರಾಪಯತಿ, ಅಂತರ್ಣೀತಣಿಚ್ । ಆದಿಶ್ಚ । ವಿಶ್ವ ಏವಂ ವೇದಿತುರಾದಿಶ್ಚ ಭವತಿ, ಆವಿರ್ಭೂತಸ್ವರೂಪತಯಾ ಮುಕ್ತರೂಪೇಣ ತತ ಉತ್ಪದ್ಯತೇ ತಜ್ಜ್ಞಾನೀತಿ ತಸ್ಯಾಯಮಾದಿಃ ಕಾರಣಂ ಭವತೀತ್ಯರ್ಥಃ । ಯದ್ವಾಽಽದಿಶ್ಚೇತ್ಯತ್ರೈವಾಸ್ಯೇತಿ ಶೇಷಃ । ಆಪ್ನೋತೀತ್ಯತ್ರ ತು ಸ ಜ್ಞಾನೀತಿ ಶೇಷೋ ಧ್ಯೇಯಃ ॥ ೧ ॥

*ಅನುವಾದ - ಹೀಗೆ ಸಮಗ್ರ, ಓಂಕಾರ ಪ್ರತಿಪಾದ್ಯನಾದ ಶ್ರೀಹರಿಯ ವಿಶ್ವಾದಿನಾಲ್ಕುರೂಪಗಳನ್ನು ಹಿಂದಿನ ಎರಡು ಖಂಡಗಳಲ್ಲಿ ನಿರೂಪಿಸಿಯಾಯಿತು. ಈ ರೂಪಗಳು ಓಂಕಾರದ ಭಾಗಗಳಾದ ಅಕಾರ, ಉಕಾರ, ಮಕಾರ, ನಾದ-ಗಳಿಂದ ಪ್ರತಿಪಾದ್ಯವೆಂದು ಈ ಖಂಡದಲ್ಲಿ ಹೇಳುತ್ತದೆ.*

*ಓಂಕಾರವಾಚ್ಯನೂ ವಿಶ್ವಾದಿ ನಾಲ್ಕು ರೂಪಗಳುಳ್ಳವನೂ ಆದ ಶ್ರೀಹರಿಯು "ಅಧಿ" ಸರ್ವೋತ್ತಮನಾಗಿರುವನು, "ಅಕ್ಷರ" ಅವಿನಾಶಿಯಾಗಿರುವನು, "ಅಧಿಮಾತ್ರ" ಪೂರ್ಣವಾದ ವಿಶ್ವಾದಿ ಅಂಶಗಳುಳ್ಳವನು. ಅಕಾರವಾಚ್ಯನಾದ ವಿಶ್ವ, ಉಕಾರವಾಚ್ಯನಾದ ತೈಜಸ, ಮಕಾರವಾಚ್ಯನಾದ ಪ್ರಾಜ್ಞ, ನಾದವಾಚ್ಯನಾದ ತುರೀಯ ಇವೇ ಆ ನಾಲ್ಕು ಅಂಶಗಳು.*

*ಭಗವಂತನ ನಾಲ್ಕು ಅಂಶಗಳಲ್ಲಿ ಜೀವನ ಶರೀರದ ಕಣ್ಣನಲ್ಲಿರುವ ಮೊದಲ ಅಂಶನಾದ ವೈಶ್ವಾನರನು ಓಂಕಾರದ ಮೊದಲ ಅಕ್ಷರವಾದ ಅಕಾರದಿಂದ ವಾಚ್ಯನು. ಏಕೆಂದರೆ, ಆವನು ಜೀವಾತ್ಮರಿಗೆ ಅವರ ಯೋಗ್ಯತೆಗೆ ತಕ್ಕಂತೆ ಭೋಗ್ಯ ವಿಷಯಗಳನ್ನು ಒದಗಿಸಿಕೊಡುತ್ತಾನೆ ಮತ್ತು ಜೀವನು ಸುಪ್ತ್ಯವಸ್ಥೆಯಿಂದ ಜಾಗ್ರದವಸ್ಥೆಗೆ ಬರುವಾಗ ಪ್ರಾಜ್ಞರೂಪವೂ, ಸ್ವಪ್ನಾವಸ್ಥೆಯಿಂದ ಜಾಗ್ರದವಸ್ಥೆಗೆ ಬರುವಾಗ ತೈಜಸರೂಪವೂ ಆದಿಯಾಗಿ (ಕಾರಣವಾಗಿ) ಉಳ್ಳವನಾಗಿದ್ದಾನೆ. ಇಂಥಹ ಅಕಾರ ವಾಚ್ಯನಾದ ವಿಶ್ವನನ್ನು ಯಾರು ಉಪಾಸನೆ ಮಾಡುವನೋ ಅವನು ತನಗೆ ಯೋಗ್ಯವಾದ ಸಕಲಭೋಗಗಳನ್ನೂ ಹೊಂದುವನು, ವಿಶ್ವನು ತನ್ನ ಉಪಾಸಕನ ಮುಕ್ತಿಗೂ ಕಾರಣನಾಗುವನು.*

***ವಿವರಣೆ*** *: ಅಂತರ್ಗತಣ್ಯರ್ಥವಾದ ''ಆಪ್‌ಲೃವ್ಯಾಪ್ತೌ'' ಎನ್ನುವ ಧಾತುವಿಗೆ ಡ ಪ್ರತ್ಯಯವನ್ನು ಹೇಳಿದಾಗ ''ಆ'' ಎನ್ನುವ ರೂಪಸಿದ್ಧಿಸುತ್ತದೆ. ಅಥವಾ ''ಪ್ರಾಜ್ಞಸ್ಥೈಜಸಶ್ಚ ಆದೀ ಅಸ್ಯ'' ಎಂದು ಮತ್ವರ್ಥೀಯ ಸಮಾಸ ಮಾಡಿದರಾಗಲಿ ಮೇಲಿನ ರೂಪಸಿದ್ಧವಾಗುವುದು.*

**ಉಪನಿಷತ್**

**ತೈಜಸನು ಉಕಾರವಾಚ್ಯ**

**ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರಾ । ಉತ್ಕರ್ಷಾದುಭಯ-ತ್ವಾದ್ ವಾ ಉತ್ಕರ್ಷತಿ ಹ ವೈ ಜ್ಞಾನಸಂತತಿಂ ಸಮಾನಶ್ಚ ಭವತಿ ನಾಸ್ಯಾಬ್ರಹ್ಮವಿತ್ ಕುಲೇ ಭವತಿ ಯ ಏವಂ ವೇದ ॥ ೨ ॥**

**ಭಾಷ್ಯಂ**

**ಶರೀರಾಭಿಮಾನಾತ್ ಉತ್ಥಾಪ್ಯ ಕರ್ಷತೀತಿ ಉತ್ಕರ್ಷಃ । ನಿದ್ರಾ ವಿಷಯಾನುಭವಶ್ಚ ಅನೇನ ಕ್ರಿಯತೇ ಇತಿ ಉಭಯತ್ವಂ । ಸಮಾನಃ ಸರ್ವೇಷಾಂ ಮಧ್ಯಸ್ಥೋ ಭವತಿ ॥ ೨ ॥**

***ಅನುವಾದ*** *— ತೈಜಸನು ಉಕಾರದಿಂದ ಪ್ರತಿಪಾದ್ಯನಾಗಲು ಉಪನಿಷತ್ತು ಹೇಳಿದ ನಿಮಿತ್ತಗಳಲ್ಲಿ ಒಂದು 'ಉತ್ಕರ್ಷ'. ಇದಕ್ಕೆ 'ಶರೀರಾಭಿಮಾನದಿಂದ ಬಿಡಿಸಿ ವಾಸನಾಮಯವಾದ ಸ್ವಾಪ್ನ ವಸ್ತುಗಳೆಡೆಗೆ ಜೀವನನ್ನು ಸೆಳೆಯುವವನು' ಎಂದರ್ಥ. ಮತ್ತೊಂದು ನಿಮಿತ್ತ 'ಉಭಯತ್ವ'. 'ಮನಸ್ಸಿನ ಹೊರತು ಬೇರೆ ಇಂದ್ರಿಯಗಳ ಚಟುವಟಿಕೆಗಳಿಗೆ ವಿರಾಮ ರೂಪವಾದ ನಿದ್ರೆ ಹಾಗೂ ಸ್ವಾಪ್ನವಿಷಯಾನುಭವ ಇವೆರಡನ್ನು ಜೀವನಿಗೆ ಉಂಟುಮಾಡುವವನು' ಎಂದು ಅದರ ಅರ್ಥ.*

*ತೈಜಸನು ಉಕಾರವಾಚ್ಯನೆಂದು ತಿಳಿದವನು ಸಮಾನನಾಗುವನು ಎಂದಿದೆ. ಇದಕ್ಕೆ 'ಎಲ್ಲ ಮುಕ್ತರ ಮಧ್ಯದಲ್ಲಿರುವವನಾಗುವನು' ಎಂದರ್ಥ.*

**ಖಂಡಾರ್ಥಃ**

ಕೋ ದ್ವಿತೀಯಃ ಪಾದಃ ? ಯ ಉಕಾರ ಇತ್ಯುಕ್ತ ಇತ್ಯತ ಆಹ - ಸ್ವಪ್ನಸ್ಥಾನ ಇತಿ ।

ಸ್ವಪ್ನಸ್ಥಾನೋ ದ್ವಿತೀಯಾ ಮಾತ್ರಾ ಆತ್ಮನೋ ದ್ವಿತೀಯೋಽಂಶಃ । ತೈಜಸ ಉಕಾರಃ ಉ ಇತ್ಯಾಕ್ರಿಯಮಾಣತ್ವಾದುಕಾರ ಇತ್ಯುಕ್ತಃ । ಉವರ್ಣವಾಚ್ಯತ್ವೇ ನಿಮಿತ್ತದ್ವಯಮಾಹ -

ಉತ್ಕರ್ಷಾದುಭಯತ್ವಾದ್ವೇತಿ । ಜಾಗ್ರದ್ದಶಾಯಾಂ ವಿದ್ಯಮಾನದೇಹಾಭಿಮಾನಾದುತ್ಕಾಪ್ಯ ದೇಹಾಭಿಮಾನಂ ತ್ಯಾಜಯಿತ್ವಾ ಸ್ವಪ್ನಮಂಡಲೇ ಜೀವಂ ಕರ್ಷತೀತ್ಯುತ್ಕರ್ಷಣಾ-ದ್ದೇತೋರ್ವಾ, ಬಾಹ್ಯಾಜ್ಞಪ್ತಿರೂಪನಿದ್ರಾಂ ವಾಸಾನಾಮಯವಿಷಯಾನುಭವಂ ಚ ಪ್ರಯಚ್ಛತೀತ್ಯುಭಯತ್ವಾದ್, ಉಭಯಹೇತುತ್ವಾದ್ವಾ ನಿಮಿತ್ತಾದ್ ಉ ಇತ್ಯುಚ್ಯತೇ ತೈಜಸ ಇತ್ಯರ್ಥಃ । ತಥಾ ವೇದಿತುಃ ಫಲಮಾಹ – ಉತ್ಕರ್ಷತಿ ಹ ವಾ ಇತಿ । ಯೋಽಧಿಕಾರೀ ಏವಂ ನಿಮಿತ್ತದ್ವಯಯುಕ್ತಯೋಕಾರವಾಚ್ಯತೈಜಸಂ ವೇದ ಸ ಜ್ಞಾನೀ ಜ್ಞಾನಸಂತತಿಂ ಜ್ಞಾನಧಾರಾಂ, ಜ್ಞಾನನಿತ್ಯತ್ವಮಿತಿ ಯಾವತ್, ಆಪ್ನೋತೀತ್ಯನುಷಂಗಃ । ಉತ್ಕರ್ಷತಿ ದೇಹಬಂಧಾದಾತ್ಮಾನಂ ಉತ್ಕರ್ಷತಿ ಉದ್ಧರತಿ । ಉತ್ಕೃಷ್ಟ ಚ, ಸಮಾನಶ್ಚ 'ಮಾನಮಂತರ್ಗತಿಸ್ಸ್ಮೃತಾ' ಇತ್ಯುಕ್ತೇಃ ಮಾನಸಹಿತಃ ಸಮಾನಃ ಸರ್ವಮೋಕ್ಷಿಣಾಂ ಅಂತರ್ಗತಸ್ತನ್ಮಧ್ಯಸ್ಥೋ ಭವತೀತ್ಯರ್ಥಃ । ದೋಷಾಭಾವಾತ್ ಸ್ನೇಹಾಚ್ಚೇತಿ ಭಾವಃ । ಅಸ್ಯ ಜ್ಞಾನಿನಃ ಕುಲೇ ಅಬ್ರಹ್ಮವಿನ್ನ ಭವತಿ, ಬ್ರಹ್ಮಜ್ಞಾನಿಸಂತತಿರೇವ ಭವತೀತ್ಯರ್ಥಃ ॥ ೨ ॥

*ಅನುವಾದ - ಜೀವಾತ್ಮರ ಕಂಠದಲ್ಲಿರುವ ಹರಿಯ ಎರಡನೆಯ ಅಂಶನಾದ ತೈಜಸನು ಓಂಕಾರದಲ್ಲಿ ಅಡಕವಾದ ಉಕಾರದಿಂದ ವಾಚ್ಯನು. ಏಕೆಂದರೆ ಇವನು ಜೀವಾತ್ಮನನ್ನು ಎಚ್ಚರಾವಸ್ಥೆಯಲ್ಲಿರುವ ದೇಹಾಭಿಮಾನದಿಂದ ಬಿಡಿಸಿ ಸ್ವಪ್ನ ಪ್ರಪಂಚಕ್ಕೆ ಸೆಳೆಯುವನು ಮತ್ತು ಬಾಹ್ಯ ಪ್ರಪಂಚದ ಅಜ್ಞಾನರೂಪವಾದ ನಿದ್ದೆ ಹಾಗೂ ಸ್ವಾಪ್ನ ವಸ್ತುಗಳ ಅನುಭವ ಇವೆರಡಕ್ಕೂ ಕಾರಣನಾಗಿದ್ದಾನೆ. ಯಾರು ತೈಜಸನನ್ನು ಈ ರೀತಿಯಾಗಿ ಉಪಾಸನೆ ಮಾಡುವನೋ ಅವನು ಮುಕ್ತನಾಗಿ ನಿತ್ಯಜ್ಞಾನವನ್ನು ಪಡೆಯುವನು. ದೇಹಬಂಧನದಿಂದ ತನ್ನನ್ನು ಮೇಲೆತ್ತಿ-ಕೊಳ್ಳುವನು, ತೈಜಸನಲ್ಲಿರುವ ಭಕ್ತಿಯಿಂದಾಗಿಯೂ, ಕಾಮರಾಗಾದಿ ದೋಷ-ಗಳಿಲ್ಲದಿರುವುದರಿಂದಾಗಿಯೂ ಎಲ್ಲ ಮುಕ್ತರ ನಡುವೆ ತಾನೂ ಒಬ್ಬನಾಗಿ ಸೇರಿಕೊಳ್ಳುವನು. ಇಂಥಹ ಜ್ಞಾನಿಯ ಕುಲದಲ್ಲಿ ಬ್ರಹ್ಮಜ್ಞಾನಿಗಳಾಗದ ಮಕ್ಕಳು ಹುಟ್ಟುವುದಿಲ್ಲ.*

ಉಪನಿಷತ್

ಪ್ರಾಜ್ಞನು ಮಕಾರವಾಚ್ಯ

ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ । ಮಿತೇರ-ಪೀತೇರ್ವಾ । ಮಿನೋತಿ ಹ ವಾ ಇದಂ ಸರ್ವಮಪೀತಿಶ್ಚ ಭವತಿ ಯ ಏವಂ ವೇದ ॥ ೩ ॥

ಭಾಷ್ಯಂ

ಮಿತೇಃ ಅಂತರ್ಗಮನಾತ್ ।

ಅಧಿಕತ್ವಾಚ್ಚ ನಿತ್ಯತ್ವಾದಧ್ಯಕ್ಷರಮುದಾಹೃತಃ ।
ಯೇಂಽಶಾಸ್ತಸ್ಯ ತು ಸರ್ವೇಽಪಿ ಪೂರ್ಣಾಃ ಪ್ರತ್ಯೇಕಶಃ ಪ್ರಭೋಃ ।
ಅತೋಽಧಿಮಾತ್ರಮುದ್ದಿಷ್ಟೋ ಮಾತ್ರಾ ಅಂಶಾ ಉದಾಹೃತಾಃ ।
ಶ್ರುತಃ ಸ ವಿಷ್ಣುರೋಂಕಾರ ಓಮಿತ್ಯಾಕ್ರಿಯತೇ ಯತಃ ।
ಆದ್ಯಸ್ತದಂಶೋ ವ್ಯಾಪ್ತಿಃ ಸ್ಯಾದ್ ವಿಷಯಾನಾಪಯೇದ್ ಯತಃ ।
ಜೀವಸ್ಯ ತು ಯತಃ ಪ್ರಾಜ್ಞಾತ್ ತೈಜಸಾದ್ ವಾ ಸಮುತ್ಥಿತಃ ।
ತಸ್ಮಾದುತ್ಪದ್ಯತೇ ಮುಕ್ತಃ ತಜ್ಜ್ಞಾನಾನಂದಲಕ್ಷಣಃ ।
ಆಪ್ನೋತಿ ವಿಷಯಾನ್ ಸರ್ವಾನ್ ನಿದ್ರಾಯಾ ವಿಷಯಸ್ಯ ಚ ।
ಉಭಯೋಃ ಕಾರಣತ್ವೇನ ಹ್ಯುಭಯಸ್ತೈಜಸಃ ಸ್ಮೃತಃ ।
ದೇಹಾಭಿಮಾನಾದುದ್ಧೃತ್ಯ ಕರ್ಷತಿ ಸ್ವಪ್ನಮಂಡಲೇ ।
ಉತ್ಕರ್ಷತ್ವಂ ತತಸ್ತಸ್ಯ ತಜ್ಜ್ಞಾನೀ ಜ್ಞಾನನಿತ್ಯತಾಂ ।
ಆಪ್ನೋತಿ ದೇಹಾದುತ್ಕೃಷ್ಯ ಸ್ವಾತ್ಮಾನಂ ಸರ್ವಮೋಕ್ಷಿಣಾಂ ।
ಮಧ್ಯಸ್ಥಃ ಸ ಭವೇತ್ ಸ್ನೇಹಾದ್ ದೋಷಾಭಾವಾಚ್ಚ ಸರ್ವಶಃ ।
ಸ್ವಾತ್ಮನ್ಯಂತರ್ಗಮಯತಿ ಮಾನಮಂತರ್ಗತಿಃ ಸ್ಮೃತಾ ।
ಜೀವಮಂತರ್ಗತಂ ಕೃತ್ವಾ ತಜ್ಜ್ಞಾನಲಯಕೃದ್ಯತಃ ।
ಪ್ರಾಜ್ಞೋ ಮಾನಮಪೀತಿಶ್ಚ ತಜ್ಜ್ಞೋಽಪ್ಯೇವಂ ವಿಮುಕ್ತಿಗಃ ।
ವ್ಯಾಪ್ತ್ಯಾಂತರ್ಗಮಯೇತ್ ಸರ್ವಂ ದುಃಖಾದ್ಯಂ ತು ವಿಲಾಪಯೇತ್ ।
ಅಣೂನಾಮಪಿ ಜೀವಾನಾಂ ಪ್ರಕಾಶೋ ವ್ಯಾಪಕೋ ಭವೇತ್ ।
ಅಂಡಮಾತ್ರೇ ಬಹಿಶ್ಚಾಪಿ ದೇವತಾನಾಂ ಯಥಾಕ್ರಮಂ ।
ಅತೋಂಽತರ್ಗಮನಂ ಮುಕ್ತೌ ಜೀವೇಷು ಜಗತೋ ಭವೇದ್ ।

ಇತಿ ಬೃಹತ್ತರ್ಕೇ ॥ ೩ ॥

*ಅನುವಾದ* — *ಪ್ರಾಜ್ಞನು ಮಕಾರವಾಚ್ಯನಾಗಲು ಉಪನಿಷತ್ತು ಹೇಳಿದ ನಿಮಿತ್ತಗಳಲ್ಲಿ ಒಂದು ಮಿತಿ. ಮಿತಿ ಅಂದರೆ ಜೀವನನ್ನು ಆಲಿಂಗಿಸಿ ತನ್ನೊಳಗೆ ಸೇರಿಸಿಕೊಳ್ಳುವುದು.*

*ಈ ಮೂರು ಉಪನಿಷನ್ಮಂತ್ರಗಳಲ್ಲಿ ಹೇಳಿರುವ ಪ್ರಮೇಯಗಳನ್ನು ಬೃಹ ತರ್ಕ ಸ್ಪಷ್ಟಪಡಿಸಿದೆ— ಸರ್ವೋತ್ತಮನೂ ಅವಿನಾಶಿಯೂ ಆಗಿರುವುದರಿಂದ*

ವಿಶ್ವಾದಿ ಅಂಶಗಳುಳ್ಳ ಪರಮಾತ್ಮನು ಅಧ್ಯಕ್ಷರ ಎನಿಸಿರುವನು. 'ಮಾತ್ರ' ಎಂದರೆ ಅಂಶವೆಂದರ್ಥ. ಪರಮಾತ್ಮನ ಅಂಶಗಳಲ್ಲಿ ಪ್ರತಿಯೊಂದೂ ಪೂರ್ಣ-ವಾಗಿರುವುದರಿಂದ ಅವನು ಅಧಿಮಾತ್ರನೆಂದು ಕರೆಯಲ್ಪಡುವನು. ಶ್ರೀವಿಷ್ಣುವು ಓಂಕಾರ ಎಂದು ಕರೆಯಲ್ಪಡುವುದರಿಂದ ಓಂಕಾರನೆಂದೇ ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ಓಂಕಾರದ ಮೊದಲ ಅಕ್ಷರ ಅಕಾರ. ಇದು 'ಆಪ್ತಿ' ಅಂದರೆ ಹೊಂದುವಿಕೆ ಎಂಬ ಅರ್ಥವನ್ನು ಹೇಳುವುದು. ಓಂಕಾರವಾಚ್ಯನಾದ ಭಗವಂತನ ಮೊದಲ ಅಂಶನಾದ ವಿಶ್ವನು ಜೀವನಿಗೆ ವಿಷಯ ಪದಾರ್ಥಗಳನ್ನು ಹೊಂದಿಸಿಕೊಡುವುದರಿಂದ 'ಆಪ್ತಿ' ಎನಿಸಿರುವನು. ಆದ್ದರಿಂದ ಓಂಕಾರದ ಮೊದಲ ಅಕ್ಷರವಾದ ಅಕಾರದಿಂದ ವಾಚ್ಯನಾಗಿದ್ದಾನೆ. ವಿಶ್ವನು ಪ್ರಾಜ್ಞ ಮತ್ತು ತೈಜಸರಿಂದ ಅತ್ಯಂತ ಅಭಿನ್ನನು. ಆದರೂ ಅವನು ಪ್ರಾಜ್ಞ ಅಥವಾ ತೈಜಸರೂಪಗಳಿಂದ ಐಕ್ಯ ಹೊಂದಿದ್ದು ಮತ್ತೆ ಪ್ರತ್ಯೇಕನಾಗಿರುವುದರಿಂದ ಆದಿಮಾನ್ ಎನಿಸಿರುವನು. ಉಪಾಸಕನು ವಿಶ್ವನಿಂದ ಮುಕ್ತಿಯಲ್ಲಿ ಸಚ್ಚಿದಾನಂದ ರೂಪನಾಗಿ ಅಭಿವ್ಯಕ್ತನಾಗುವುದರಿಂದ ಉಪನಿಷತ್ತಿನಲ್ಲಿ ಉಪಾಸಕನಿಗೆ ವಿಶ್ವನು ಆದಿಯಾಗುವನೆಂದು ಹೇಳಿದೆ. ಮುಕ್ತಿಗೆ ಕಾರಣನಾಗುವನೆಂದು ಅರ್ಥ. ಹಾಗೆಯೇ ವಿಶ್ವೋಪಾಸಕನು ತಾನು ಬಯಸಿದ ವಿಷಯ-ಗಳೆಲ್ಲವನ್ನೂ ಹೊಂದುವನು.

ನಿದ್ರೆ ಹಾಗೂ ಸ್ವಾಪ್ನ ವಿಷಯಾನುಭವ ಇವೆರಡಕ್ಕೂ ಕಾರಣನಾಗಿರುವ ಪ್ರಯುಕ್ತ ತೈಜಸನು ಉಭಯ ಎನಿಸಿರುವನು. ಹಾಗೆಯೇ ಜೀವಾತ್ಮನ ದೇಹಾಭಿಮಾನವನ್ನು ಹೋಗಲಾಡಿಸಿ ವಾಸನಾಮಯ ಪದಾರ್ಥಗಳನ್ನು ತೋರಿಸಿ ಕೊಡುವುದಕ್ಕಾಗಿ ಜೀವಾತ್ಮನನ್ನು ಸ್ವಪ್ನಸ್ಥಾನಕ್ಕೆ ಸೆಳೆಯುವುದರಿಂದ ತೈಜಸನಿಗೆ 'ಉತ್ಕರ್ಷತ್ವವು' ಇರುವುದು. ತೈಜಸನು ಉಕಾರ ಪ್ರತಿಪಾದ್ಯನೆಂದು ತಿಳಿದವನು ಲಿಂಗದೇಹದಿಂದ ತನ್ನನ್ನು ಮೇಲೆತ್ತಿಸಿಕೊಂಡು ಮುಕ್ತನಾಗುವುದರಿಂದ ನಿತ್ಯಜ್ಞಾನವನ್ನು ಹೊಂದುವನು. ತೈಜಸನಲ್ಲಿರುವ ಭಕ್ತಿಯಿಂದಾಗಿಯೂ ಕಾಮರಾಗಾದಿ ದೋಷಗಳಿಲ್ಲದಿರುವುದರಿಂದಾಗಿಯೂ ಅವನು ಉಳಿದ ಮುಕ್ತಾತ್ಮರ ಮಧ್ಯದಲ್ಲಿರುವವನಾಗುವನು.

ಪ್ರಾಜ್ಞನು ಅಜ್ಞಾನಾವೃತನಾದ ಜೀವನನ್ನು ತನ್ನೊಳಗೆ ಸೇರಿಸಿಕೊಳ್ಳುವನು. ಅಲ್ಲದೆ ಜೀವನ ಬಾಹ್ಯ ಪದಾರ್ಥ ಜ್ಞಾನವನ್ನು ಲಯಗೊಳಿಸುವನು. ಒಳಗೆ ಸೇರಿಸಿಕೊಳ್ಳುವಿಕೆಯೇ 'ಮಾನ' ಎನಿಸಿದ್ದು ಇಂತಹ ಕ್ರಿಯೆಯನ್ನು

*ನಡೆಸುವುದರಿಂದ ಪ್ರಾಜ್ಞನು 'ಮಾನ' ಎಂದೂ, ಬಾಹ್ಯ ಜ್ಞಾನವನ್ನು ನಾಶಪಡಿಸುವುದರಿಂದ ''ಅಪೀತಿ'' ಎಂದೂ ಕರೆಯಲ್ಪಟ್ಟಿರುವನು. ಪ್ರಾಜ್ಞನನ್ನು ಮಕಾರವಾಚ್ಯನನ್ನಾಗಿ ತಿಳಿದವನೂ ಕೂಡಾ ಮುಕ್ತಿಯನ್ನು ಪಡೆದವನಾಗಿ ತನ್ನ ಜ್ಞಾನಪ್ರಕಾಶದ ವ್ಯಾಪ್ತಿಯಲ್ಲಿ ಎಲ್ಲವನ್ನು ಒಳಪಡಿಸಿಕೊಳ್ಳುವನು. ಅಂದರೆ ಎಲ್ಲ ವಸ್ತುಗಳ ಜ್ಞಾನವನ್ನೂ ಪಡೆಯುವನು. ದುಃಖಾದಿ ಅನಿಷ್ಟಗಳನ್ನು ಪರಿಹರಿಸಿ-ಕೊಳ್ಳುವನು. ಜೀವಾತ್ಮರು ಅಣುಗಳಾಗಿರುವರು ಆದರೂ ಅವರ ಪ್ರಕಾಶವು ಬ್ರಹ್ಮಾಂಡದ ಒಳಗೆ ವ್ಯಾಪಿಸಿಕೊಂಡಿರುವುದು. ದೇವತೆಗಳ ಪ್ರಕಾಶವು ಕ್ರಮವಾಗಿ ಬ್ರಹ್ಮಾಂಡದ ಹೊರಗೂ ವ್ಯಾಪಿಸಿರುವುದು. ಹೀಗೆ ಪ್ರಕಾಶದಿಂದ ವ್ಯಾಪಕ-ವಾಗಿರುವುದರಿಂದ ಮುಕ್ತಿಯಲ್ಲಿ ಜಗತ್ತು ಜೀವರಲ್ಲಿ ಸೇರಿಕೊಳ್ಳುವುದೆಂದು ವ್ಯವಹರಿಸಲಾಗಿದೆ ॥ ೩ ॥*

ಖಂಡಾರ್ಥ:

ಕಃ ತೃತೀಯಃ ಪಾದಃ ? ಕಥಮಸ್ಯ ಮಕಾರತ್ವಮ್ ? ಕಿಂಚ ತಜ್ಞಾನಿನಃ ಫಲಮ್? ಇತ್ಯತಸ್ತತ್ಸರ್ವಂ ಕ್ರಮಾದಾಹ - ಸುಷುಪ್ತಸ್ಥಾನ ಇತಿ ।

ಸುಷುಪ್ತಸ್ಥಾನಸ್ತೃತೀಯಾ ಮಾತ್ರಾ, ಆತ್ಮನಸ್ತೃತೀಯೋಂಽಶಃ ಪ್ರಾಜ್ಞಃ ಮಕಾರೋ ಮ ಇತ್ಯಾಕ್ರಿಯಮಾಣಃ । ಕುತಃ ? ಮಿತೇರಪೀತೇರ್ವಾ । ಸ್ವಾತ್ಮನಿ ಜೀವಮಂತರ್ಗಯತೀತಿ ಸ್ವಾಂತರ್ಗಮನಹೇತೋರ್ವಾ, ವೃತ್ತಿಜ್ಞಾನಸ್ಯಾಪೀತೇರಪ್ಯಯಶಬ್ದಿತಲಯಕರಣಾದ್ವಾ ಮ ಇತ್ಯಾಕ್ರಿಯತ ಇತ್ಯರ್ಥಃ । ಯೋಽಧಿಕಾರೀ ಏವಂ ನಿಮಿತ್ತದ್ವಯಯುಕ್ತತ್ವೇನ ಮಕಾರವಾಚ್ಯಂ ಪ್ರಾಜ್ಞಂ ವೇದ, ಸ ಜ್ಞಾನೀ ಇದಂ ಸರ್ವಂ ಯಥಾಯೋಗ್ಯಂ ಜಗನ್ಮಿನೋತಿ ಸ್ವಾಂತರ್ಗಮಯತಿ । ಜೀವಾನಾಮಣುತ್ವೇಽಪ್ಯಧಿಕಾರಿಣಃ ಸೂರ್ಯಾದೇರಿವ ಪ್ರಕಾಶತೋ ವ್ಯಾಪ್ತಿರಸ್ತೀತಿ ತನ್ಮಧ್ಯೇಂಽತರ್ಗಮಯತಿ ಮುಕ್ತಃ ಸನ್ನಿತಿ ಭಾವಃ । ಅಪೀತಿಶ್ಚ ಭವತಿ ಅಪ್ಯಯಕೃಚ್ಚ ಭವತಿ, ದುಃಖಾದ್ಯನಿಷ್ಟಸ್ಯೇತ್ಯರ್ಥಃ ॥ ೩ ॥

***ಅನುವಾದ*** *- ಜೀವನ ಶರೀರದ ಹೃದಯಭಾಗದಲ್ಲಿರುವ ಹರಿಯ ಮೂರನೇ ಅಂಶವಾದ ಪ್ರಾಜ್ಞನು ಓಂಕಾರದ ಮಕಾರದಿಂದ ಪ್ರತಿಪಾದ್ಯನು. ಏಕೆಂದರೆ, ಅವನು ನಿದ್ರಾವಸ್ಥೆಯಲ್ಲಿ ಜೀವನನ್ನು ತನ್ನೊಳಗೆ ಸೇರಿಸಿಕೊಳ್ಳುವನು ಮತ್ತು ಆಗ ಜೀವನಿಗೆ ಬಾಹ್ಯ ಪದಾರ್ಥಗಳ ಜ್ಞಾನವನ್ನು ಲಯಗೊಳಿಸುವನು. ಯಾರು ಪ್ರಾಜ್ಞನನ್ನು ಈ ರೀತಿ ತಿಳಿಯುವನೋ ಅವನು ಜಗತ್ತಿನ ಎಲ್ಲ ಪದಾರ್ಥಗಳನ್ನೂ ತನ್ನ ಜ್ಞಾನ ಪ್ರಕಾಶದಲ್ಲಿ ಅಂತರ್ಗತವನ್ನಾಗಿ ಮಾಡಿಕೊಳ್ಳುವನು. ಅಂದರೆ ಎಲ್ಲವನ್ನೂ ತಿಳಿದುಕೊಳ್ಳುವನು. ದುಃಖಾದಿ ಸಂಸಾರವನ್ನು ಕೂಡಾ ನೀಗಿಕೊಳ್ಳುವನು.*

ಉಪನಿಷತ್

ಬ್ರಹ್ಮದೃಷ್ಟಮಂತ್ರಗಳ ಸಂವಾದ

ಅತ್ರೈತೇ ಶ್ಲೋಕಾ ಭವಂತಿ —

ವಿಶ್ವಸ್ಯಾತ್ವವಿವಕ್ಷಾಯಾಮಾದಿಸಾಮಾನ್ಯಮುತ್ಕಟಂ ।
ಮಾತ್ರಾಸಂಪ್ರತಿಪತ್ತೌ ಸ್ಯಾದಾಪ್ತಿಸಾಮಾನ್ಯಮೇವ ಚ ॥ ೪ ॥

ಭಾಷ್ಯಂ

ಮಾತ್ರಾಸಂಪ್ರತಿಪತ್ತೌ ಅಂಶಧ್ಯಾನೇ । ಆದಿಮತ್ತ್ವಂ ವಿಶ್ವಸ್ಯ ವಿದ್ಯತೇ ॥ ೪ ॥

*ಅನುವಾದ — ಉಪನಿಷತ್ತಿನ ಮಾತ್ರಾಸಂಪ್ರತಿಪತ್ತೌ ಎಂಬ ಶಬ್ದಕ್ಕೆ ಅಂಶವೆಂದು ಧ್ಯಾನಿಸಿದರೆ ಎಂದು ಅರ್ಥ. ಜೀವಾತ್ಮನು ನಿದ್ದೆಯಿಂದ ಎಚ್ಚೆತ್ತಾಗ ನಿದ್ರಾಪ್ರೇರಕನಾದ ಪ್ರಾಜ್ಞನಿಂದಲೂ ಸ್ವಪ್ನದಿಂದ ಎಚ್ಚೆತ್ತಾಗ ತೈಜಸನಿಂದಲೂ ಅಭಿವ್ಯಕ್ತನಾಗುವುದರಿಂದ ಈ ಎರಡು ರೂಪಗಳೂ ವಿಶ್ವನಿಗೆ ಕಾರಣಗಳು. ಆದ್ದರಿಂದ ಅವನು ಆದಿಮಾನ್. ಉಪಾಸಕನಿಗೆ ವಿಶ್ವನಿಂದ ಈ ಸಾಮ್ಯವು ಸಿದ್ಧಿಸುವುದು. ಅಂದರೆ ಅವನೂ 'ಆದಿಮಾನ್' ಆಗುವನು.*

ಖಂಡಾರ್ಥಃ

ಏವಂ ರೂಪತ್ರಯಂ ಪ್ರಣವಗತಾಕಾರಾದಿವರ್ಣತ್ರಯ ಪ್ರತಿಪಾದ್ಯಮುಕ್ತ್ವಾ ಚತುರ್ಥಂ ರೂಪಮಮಾತ್ರಶ್ಚತುರ್ಥ ಇತ್ಯಾದಿನಾಽಗ್ರೇ ವಿವಕ್ಷುಃ ಪ್ರಾಗುಕ್ತರೂಪ-ತ್ರಯಜ್ಞಾನಿನೋ ಯಾನಿ ಫಲಾನ್ಯುಕ್ತಾನಿ ತತ್ರ ಬ್ರಹ್ಮದೃಷ್ಟಶ್ಲೋಕಾನ್ ಪ್ರಮಾಣಯತಿ - ತತ್ರೈತೇ ಇತಿ ।

ತತ್ರ ರೂಪತ್ರಯಜ್ಞಾನಿಫಲೇ ಏತೇ ವಕ್ಷ್ಯಮಾಣಶ್ಲೋಕಾಃ ಸಂವಾದಿನೋ ಭವಂತಿ । ಕ್ರಮೇಣ ತಾನ್ ಮಂತ್ರಾನ್ ಪಠತಿ - ವಿಶ್ವಸ್ಯೇತಿ । ಅತ್ವವಿವಕ್ಷಾಯಾಮಿತಿ ವಿವಕ್ಷಾಪದೇನೋಪಾಸನಂ ಗ್ರಾಹ್ಯಮ್ । ಆದಿಮತ್ತ್ವಾದ್ವೇತ್ಯತ್ರೋಕ್ತದಿಶಾ ಆದಿಮತ್ತ್ವ-ನಿಮಿತ್ತೇನ ಪ್ರಣವೈಕದೇಶಾಕಾರವಾಚ್ಯತ್ವೋಪಾಸನಾಯಾಂ ಸತ್ಯಾಮುಪಾಸಕಸ್ಯಾದಿ-ಸಾಮಾನ್ಯಂ ಆದಿಶ್ಚೇತ್ಯತ್ರೋಕ್ತದಿಶಾಽಽದಿಮತ್ತ್ವಸಾಮಾನ್ಯಂ ಆದಿಮತ್ತ್ವೇನ ವಿಶ್ವಸಾಮ್ಯಂ ಭವತಿ । ಉತ್ಕಟಂ ಸ್ಪಷ್ಟಮೇತತ್ । 'ತಂ ಯಥಾ ಯಥೋಪಾಸತೇ ತದೇವ ಭವತಿ' ಇತ್ಯಾದೇರಿತಿ ಭಾವಃ । ಮಾತ್ರಾಸಂಪ್ರತಿಪತ್ತೌ ಆತ್ಮನೋಂಽಶೋ ವಿಶ್ವ, ಆಪ್ತಿನಿಮಿತ್ತೇನ ಪ್ರಣವಾಂಶಾಕಾರಾರ್ಥ ಇತಿ ವಿಶ್ವರೂಪಾಂಶಧ್ಯಾನೇ ಧ್ಯಾತುರಾಪ್ತಿಸಾಮಾನ್ಯಮೇವ ಸ್ಯಾತ್ । ಸರ್ವಕಾಮಾವಾಪ್ತ್ಯಾ ಚ ವಿಶ್ವಸಾಮ್ಯಮೇವ ಭವೇದಿತ್ಯರ್ಥಃ ॥ ೪ ॥

*ಅನುವಾದ* - *ಈ ವಿಶ್ವಾದಿರೂಪಗಳನ್ನು ಬಲ್ಲವರಿಗೆ ಹಿಂದೆ ತಿಳಿಸಿದ ಫಲಗಳು ದೊರಕುವವು ಎಂಬ ವಿಷಯದಲ್ಲಿ ಮುಂದೆ ಉದಾಹರಿಸುವ ಬ್ರಹ್ಮದೃಷ್ಟವಾದ ಮಂತ್ರಗಳು ಸಂವಾದಿಗಳೆನಿಸಿವೆ—*

*ಪ್ರಣವದ ಮೊದಲ ವರ್ಣವಾದ ಅಕಾರದಿಂದ ಪ್ರತಿಪಾದ್ಯನೆಂದು ತಿಳಿದು ಪರಮಾತ್ಮನ ಅಂಶಭೂತನಾದ ವಿಶ್ವನನ್ನು ಉಪಾಸಿಸಿದಲ್ಲಿ ಆ ಉಪಾಸಕನು ವಿಶ್ವನಂತೆ ತಾನೂ ಆದಿಮಾನ್ ಎನಿಸುವನು. ಅಂದರೆ ಮೋಕ್ಷದಲ್ಲಿ ವಿಶ್ವನ ಪ್ರಸಾದದಿಂದ ಚಿನ್ಮಯ ರೂಪದಿಂದ ಅಭಿವ್ಯಕ್ತನಾಗುತ್ತಾನೆ. ಆದ್ದರಿಂದ ವಿಶ್ವನು ಆದಿ, ಉಪಾಸಕನು ಆದಿಮಾನ್ ಆಗುವನು. ಹೇಗೆ ಉಪಾಸನೆ ಮಾಡುವನೋ ಹಾಗೇ ಅವನಿಗೆ ಫಲವಾಗುತ್ತದೆ ಎಂಬ ಮಾತು ಇಲ್ಲಿ ಇದನ್ನು ಸೂಚಿಸುತ್ತದೆ. ಹಾಗೆಯೇ ವಿಶ್ವನಂತೆ ತಾನೂ ಬಯಸಿದ ಎಲ್ಲಾ ಪದಾರ್ಥಗಳ ಪ್ರಾಪ್ತಿ ಉಳ್ಳವನಾಗುತ್ತಾನೆ.*

ಉಪನಿಷತ್

**ತೈಜಸಸ್ಯೋತ್ವವಿಜ್ಞಾನೇ ಉತ್ಕರ್ಷೋ ವಿದ್ಯತೇ ಸ್ಫುಟಂ ।**
**ಮಾತ್ರಾಸಂಪ್ರತಿಪತ್ತೌ ಸ್ಯಾದುಭಯತ್ವಂ ತಥಾವಿಧಂ ॥ ೫ ॥**

ಖಂಡಾರ್ಥಃ

ತೈಜಸಸ್ಯೋತ್ವವಿಜ್ಞಾನೇ ಪ್ರಾಗುಕ್ತರೀತ್ಯೋತ್ಕರ್ಷನಿಮಿತ್ತೇನ ಪ್ರಣವೈಕದೇಶೋಕಾರ-ವಾಚ್ಯತ್ವೋಪಾಸನಾಯಾಂ ತಸ್ಯೋಪಾಸಕಸ್ಯೋತ್ಕರ್ಷತೀತ್ಯತ್ರೋಕ್ತದಿಶಾ ಸ್ಫುಟ-ಮುತ್ಕರ್ಷೋ ದೃಶ್ಯತೇ ಪ್ರಮಾಣಪ್ರಮಿತ ಇತ್ಯರ್ಥಃ । ಮಾತ್ರಾಸಂಪ್ರತಿಪತ್ತೌ ಪ್ರಾಗುಕ್ತದಿಶೋಭಯಹೇತುತ್ವನಿಮಿತ್ತೇನ ಪ್ರಣವಾಂಶೋಕಾರವಾಚ್ಯತ್ವೇನಾತ್ಮಾಂಶತೈಜಸ-ಧ್ಯಾನೇ ತಸ್ಯ ಧ್ಯಾತುಸ್ತಥಾವಿಧಂ ಪ್ರಾಗುಕ್ತಜ್ಞಾನಸಂತತಿರೂಪಂ ಸಮಾನತ್ವಂ ಚೇತ್ಯುಭಯತ್ವಂ ಸ್ಯಾದಿತ್ಯರ್ಥಃ ॥ ೫ ॥

*ಅನುವಾದ* - *ಪ್ರಣವದ ಎರಡನೆ ವರ್ಣವಾದ ಉಕಾರದಿಂದ ಪ್ರತಿಪಾದ್ಯವಾಗಿದೆ ಎಂದು ತಿಳಿದು ಪರಮಾತ್ಮನ ಅಂಶಭೂತವಾದ ತೈಜಸರೂಪವನ್ನು ಉಪಾಸಿಸಿದಲ್ಲಿ ಉಪಾಸಕನಿಗೆ ಜ್ಞಾನೋತ್ಕರ್ಷರೂಪವಾದ ಫಲವು ಸ್ಫುಟವಾಗಿ ಸಿದ್ಧಿಸುವುದು. ತೈಜಸನು ನಿದ್ರಾ, ಮತ್ತು ಸ್ವಾಪ್ನ ವಿಷಯಾನುಭವ ಈ ಎರಡನ್ನು ಹೊಂದಿರುವಂತೆ ಉಪಾಸಕನೂ ಮುಕ್ತಿಯಲ್ಲಿ ಬಾಹ್ಯೇಂದ್ರಿಯ ಉಪರಮ ರೂಪವಾದ ನಿದ್ರೆ, ಹಾಗೂ ಸ್ವರೂಪೇಂದ್ರಿಯದಿಂದ ವಿಷಯಾನುಭವ ಇವೆರಡನ್ನೂ ಹೊಂದುವನು.*

ಉಪನಿಷತ್

**ಮಕಾರಭಾವೇ ಪ್ರಾಜ್ಞಸ್ಯ ಮಾನಸಾಮಾನ್ಯಮುತ್ಕಟಂ ।**
**ಮಾತ್ರಾಸಂಪ್ರತಿಪತ್ತೌ ತು ಲಯಸಾಮಾನ್ಯಮೇವ ಚ ॥ ೬ ॥**

ಖಂಡಾರ್ಥಃ

ಪ್ರಾಜ್ಞಸ್ಯ ಮಕಾರಭಾವೇ ಮಕಾರತ್ವೇ ಪ್ರಾಗುಕ್ತಮಿತಿರೂಪನಿಮಿತ್ತೇನ ಪ್ರಣವೈಕ-ದೇಶಮವರ್ಣವಾಚ್ಯತ್ವೇ ವಿಜ್ಞಾತೇ ಸತಿ ಮಾನಸಾಮಾನ್ಯಂ ಸರ್ವಾಂತರ್ಭಾವ-ರೂಪಮಾನೇನ ಪ್ರಾಜ್ಞಸಾಮ್ಯಮುತ್ಕಟಂ ಸ್ಫುಟಮಿತ್ಯರ್ಥಃ । ಮಾತ್ರಾಸಂಪ್ರತಿಪತ್ತೌ ಬಾಹ್ಯಾದಿಜ್ಞಾನಲಯಕೃತ್ವನಿಮಿತ್ತೇನ ಪ್ರಣವಾಂಶಮಕಾರವಾಚ್ಯತ್ವೇನಾತ್ಮಾಂಶಪ್ರಾಜ್ಞಧ್ಯಾನೇ ತು ಧ್ಯಾತುರ್ಲಯಸಾಮಾನ್ಯಂ ದುಃಖಾದಿಲಯಕೃತ್ವೇನ ಪ್ರಾಜ್ಞಸಾಮ್ಯಮೇವ ಚ ಸ್ಯಾದಿತ್ಯರ್ಥಃ ॥ ೬ ॥

*ಅನುವಾದ - ಪ್ರಣವದ ತೃತೀಯಾಕ್ಷರವಾದ ಮಕಾರದಿಂದ ಪ್ರತಿಪಾದ್ಯನೆಂದು ತಿಳಿದು ಪರಮಾತ್ಮನ ಅಂಶವೆಂದು ಪ್ರಾಜ್ಞನನ್ನು ಧ್ಯಾನಿಸಿದರೆ ಆ ಉಪಾಸಕನು ಪ್ರಾಜ್ಞನಂತೆ ಎಲ್ಲವನ್ನೂ ತನ್ನ ಜ್ಞಾನಪ್ರಕಾಶದಲ್ಲಿ ಅಂತರ್ಗತ-ಗೊಳಿಸುತ್ತಾನೆ. ಮತ್ತು ಪ್ರಾಜ್ಞನಂತೆಯೇ ದುಃಖಾದಿ ಅನಿಷ್ಟಗಳ ಲಯವನ್ನು ಹೊಂದುತ್ತಾನೆ.*

ಉಪನಿಷತ್

**ತ್ರಿಷು ಧಾಮಸು ಯತ್ ತುಲ್ಯಂ ಸಾಮಾನ್ಯಂ ವೇತ್ತಿ ನಿಶ್ಚಿತಃ ।**
**ಸ ಪೂಜ್ಯಃ ಸರ್ವಭೂತಾನಾಂ ವಂದ್ಯಶ್ಚೈವ ಮಹಾಮುನಿಃ ॥ ೭ ॥**

ಖಂಡಾರ್ಥಃ

ವಿಶ್ವಾದಿರೂಪಾಣಾಮತ್ವೋತ್ವಮಕಾರಭಾವಜ್ಞಾನಿನೋ ಯದಾದಿಸಾಮಾನ್ಯಾದಿ-ಫಲಮುಕ್ತಂ ತದ್ದಾರ್ಢ್ಯಾಯ ವಿಶ್ವಾದೇರತ್ವಾದಿಜ್ಞಾನಿನ ಆದಿಸಾಮಾನ್ಯಾದಿಕಂ ಫಲಮಿತಿ ಯೋ ಜಾನಾತಿ ತಸ್ಯಾಪ್ಯಸ್ತಿ ಫಲಮಿತ್ಯಾಹ - ತ್ರಿಷ್ವಿತಿ ।

ತ್ರಿಷು ಧಾಮಸು ತ್ರಿಷು ರೂಪೇಷೂಕ್ತವಿಧಯಾ ಧ್ಯಾತೇಷು ಸತ್ಸು ಧ್ಯಾತುಃ ಪುರುಷಸ್ಯ ಯತ್ ತುಲ್ಯಂ ಧ್ಯೇಯವಿಶ್ವಾದಿಸದೃಶಂ ಆದಿಮತ್ವಾದಿಸಾಮಾನ್ಯಂ ತದ್ ಭವತೀತಿ ನಿಶ್ಚಿತಂ ಯಥಾ ತಥಾ ವೇತ್ತಿ ಸ ವೇದಿತಾ ಮಹಾಮುನಿಃ ಸರ್ವಭೂತಾನಾಂ ಪೂಜ್ಯೋ ವಂದ್ಯಶ್ಚೈವ ಭವತೀತ್ಯರ್ಥಃ ॥ ೭ ॥

*ಅನುವಾದ - ವಿಶ್ವ, ತೈಜಸ ಹಾಗೂ ಪ್ರಾಜ್ಞ ಎಂಬ ಮೂರು ಭಗವತ್ಸ್ವರೂಪಗಳನ್ನು ಅಕಾರ-ಉಕಾರ-ಮಕಾರಗಳಿಂದ ವಾಚ್ಯಗಳೆಂದು ಉಪಾಸನೆ ಮಾಡುವುದರಿಂದ ಲಭಿಸುವ ಆದಿಮತ್ತ್ವವೇ ಮೊದಲಾದ ಸಾಮ್ಯವು ಲೋಕದಲ್ಲೂ ಇರುವಂಥಹದೆಂದು ಯಾರು ತಿಳಿಯುವನೋ ನಿಶ್ಚಯಾತ್ಮಕ ಜ್ಞಾನವುಳ್ಳ ಆ ಜ್ಞಾನಿಯು ಸಕಲ ಜೀವಿಗಳಿಗೂ ಪೂಜ್ಯನಾಗುವನು, ಮಹಾಜ್ಞಾನಿಯಾಗುವನು.*

ಉಪನಿಷತ್

**ಅಕಾರೋ ನಯತೇ ವಿಶ್ವಮುಕಾರಶ್ಚಾಪಿ ತೈಜಸಂ ।**
**ಮಕಾರಶ್ಚ ಪುನಃ ಪ್ರಾಜ್ಞಂ ನಾಮಾತ್ರೇ ವಿದ್ಯತೇಽಗತಿರಿತಿ ॥ ೮ ॥**

ಭಾಷ್ಯಂ

ಪ್ರತಿದಿವಸಂ ವಿಭಾಗ ಏಕೀಭಾವಶ್ಚ ವಿದ್ಯತೇ ವಿಶ್ವಾದೀನಾಂ । ತುರೀಯಸ್ಯ ತನ್ನ ವಿದ್ಯತೇ ಇತ್ಯಮಾತ್ರಃ । ವಿಶ್ವಾದೀನಾಂ ವ್ಯವಹಾರಕಾರಣತ್ವಂ ವಿದ್ಯತೇ ತುರೀಯಸ್ಯ ತನ್ನ ವಿದ್ಯತೇ ಇತ್ಯತೋ ಗಮ್ಯತ್ವಮಪಿ ನಾಸ್ತೀತ್ಯಾಶಂಕಾಂ ನಿವಾರಯತಿ - ಅಗತಿರ್ನ ವಿದ್ಯತೇ ಇತಿ । ಆತ್ಮಾನಂ ಸಂವಿಶತೀತಿ ಗತಿವಚನಾತ್ ।

ಆದಿಮತ್ತ್ವೇನ ಸಾಮಾನ್ಯಮುಪಾಸ್ಯೇನ ಭವೇದಿತಿ ।
ಉಪಾಸಕಸ್ಯ ಸಂಜಾನನ್ ಸರ್ವವಂದ್ಯೋ ಭವೇತ್ ಪುಮಾನ್ ।
ಸಾಮಾನ್ಯತ್ರಯಮಪ್ಯೇತತ್ ತುಲ್ಯಂ ಮುಕ್ತಿಗತತ್ತ್ವತಃ ।
ಅಮಾತ್ರತ್ವಂ ತುರೀಯಸ್ಯ ತ್ವವಿಭಾಗಾದ್ ದಿನೇ ದಿನೇ ।
ಜಾಗ್ರದಾದೇರಕರ್ತಾಪಿ ಗಮ್ಯೋಽಸೌ ಜ್ಞಾನಿನಾಂ ಭವೇತ್ ॥ ಇತಿ ಚ ।
ಆದಿಮತ್ತ್ವಾದಿಸಾಮಾನ್ಯಂ ತುಲ್ಯಂ ಮೋಕ್ಷೋಪಭೋಗ್ಯತಃ ।
ಅಮಾತ್ರತ್ವಂ ತುರೀಯಸ್ಯಾಪ್ಯವಿಭಾಗಾದ್ದಿನೇ ದಿನೇ ॥

ಇತಿ ಆತ್ಮ ಸಂಹಿತಾಯಾಂ ।

ಇತಿ ತೃತೀಯಃ ಖಂಡಃ ॥

*ಅನುವಾದ — ವಿಶ್ವ, ತೈಜಸ ಹಾಗೂ ಪ್ರಾಜ್ಞ ಇವರಿಗೆ ಅನ್ಯೋನ್ಯವಾಗಿ ಪ್ರತಿನಿತ್ಯವೂ ಐಕ್ಯವೂ, ವಿಭಾಗವೂ ಇರುವುದು. ತುರೀಯನಿಗೆ ಇತರ ರೂಪಗಳ ಜೊತೆ ಐಕ್ಯವಾಗಲಿ ವಿಭಾಗವಾಗಲಿ ಇಲ್ಲ. ಆದುದರಿಂದಲೆ ತುರೀಯನು ಅಮಾತ್ರ ಎಂದೆನಿಸಿರುವನು. ವಿಶ್ವವೆ ಮೊದಲಾದ ಭಗವದ್ರೂಪಗಳು ಜಾಗ್ರದಾದಿ*

ಪ್ರವೃತ್ತಿಗೆ ಕಾರಣವೆನಿಸಿವೆ. ಆದುದರಿಂದಲೇ ಆಯಾ ಅವಸ್ಥೆಯಲ್ಲಿ ಜೀವರಿಗೆ ಆಯಾಯ ರೂಪಗಳಲ್ಲಿ ಪ್ರವೇಶವಿದೆ. ತುರೀಯನು ಯಾವುದೆ ಪ್ರವೃತ್ತಿಗೆ ಕಾರಣನಾಗದ ಪ್ರಯುಕ್ತ ಅವನಲ್ಲಿ ಜೀವಾತ್ಮರಿಗೆ ಪ್ರವೇಶವೂ ಇರಲಿಕ್ಕಿಲ್ಲವೆಂಬ ಸಹಜವಾದ ಸಂಶಯವನ್ನು ಪರಿಹರಿಸಿದೆ ಉಪನಿಷತ್ತು — 'ಅಗತಿಃ ನ ವಿದ್ಯತೇ' ತುರೀಯನಲ್ಲಿ ಜೀವಾತ್ಮರಿಗೆ ಪ್ರವೇಶವಿಲ್ಲದಿಲ್ಲ' ಎಂದು. ಪ್ರವೇಶವಿದ್ದೇ ಇದೆ ಎಂದು ತಾತ್ಪರ್ಯ. ಮುಂದೆ ತುರೀಯ ಭಗವದ್ರೂಪ ಪ್ರಸ್ತಾವನೆಯಲ್ಲಿ 'ಆತ್ಮಾನಂ ಸಂವಿಶತಿ' ಎಂದು ಜೀವಾತ್ಮರಿಗೆ ತುರೀಯನಲ್ಲಿ ಪ್ರವೇಶವನ್ನು ಹೇಳಿದ್ದರಿಂದ 'ನಾಮಾತ್ರೇ ವಿದ್ಯತೇ ಗತಿಃ' ಎಂಬಲ್ಲಿ ವಿದ್ಯತೇ ಶಬ್ದದ ಮುಂದೆ ಅಕಾರವನ್ನಿಟ್ಟುಕೊಂಡು ಅಗತಿ = ಪ್ರವೇಶಾಭಾವ ಇಲ್ಲ, ಪ್ರವೇಶವೇ ಇದೆ ಎಂದು ವ್ಯಾಖ್ಯಾನ ಮಾಡುವುದು ಸಮುಚಿತ.

ಈ ಮಂತ್ರಗಳಲ್ಲಿ ಹೇಳಿದ ವಿಷಯಗಳನ್ನು ಬ್ರಹ್ಮತರ್ಕವೂ ಹೇಳಿದೆ - ಭಗವಂತನ ವಿಶ್ವರೂಪವನ್ನು ಉಪಾಸನೆ ಮಾಡುವವನಿಗೆ ಉಪಾಸ್ಯನಾದ ವಿಶ್ವನಿಂದ ಆದಿಮತ್ತ್ವಾದಿ ಧರ್ಮಗಳಲ್ಲಿ ಸಾದೃಶ್ಯವುಂಟಾಗುವುದೆಂದು ಸರಿಯಾಗಿ ತಿಳಿದುಕೊಂಡವನು ಸಕಲವಂದ್ಯನಾಗುವನು. ವಿಶ್ವೋಪಾಸಕನಿಗೆ ವಿಶ್ವನಿಂದ ಆದಿಮತ್ತ್ವದಲ್ಲಿ ಹಾಗೂ ಆಪ್ತಿಯಲ್ಲಿ ಸಾಮ್ಯವು ಸಿದ್ಧಿಸುವುದು. ತೈಜಸೋಪಾಸಕನಿಗೆ ತೈಜಸನಿಂದ ಉತ್ಕರ್ಷದಲ್ಲಿ ಹಾಗೂ ಉಭಯತ್ವದಲ್ಲಿ ಸಾಮ್ಯವು ಬರುವುದು. ಪ್ರಾಜ್ಞನ ಉಪಾಸಕನಿಗೆ ಪ್ರಾಜ್ಞನಿಂದ ಮಾನ ಹಾಗೂ ಲಯದಲ್ಲಿ ಸಾಮ್ಯವು ಉಂಟಾಗುವುದು. ಈ ರೀತಿಯಾಗಿ ಮೂರು ರೂಪಗಳ ಉಪಾಸನೆಯಿಂದ ದೊರಕುವ ಮೂರುವಿಧವಾದ ಸಾಮ್ಯವೂ ಮೋಕ್ಷದಲ್ಲೂ ಇರುವ ಪ್ರಯುಕ್ತ ಅವಿಕಾರಿ ಎನಿಸಿದೆ. ತುರೀಯನಿಗೆ ಪ್ರತಿನಿತ್ಯ ವಿಶ್ವ ಹಾಗೂ ತೈಜಸರ ಜೊತೆ ಏಕೀಭಾವವಾಗಲೀ ವಿಭಾಗವಾಗಲೀ ಇಲ್ಲದುದರಿಂದ ಅವನು ಅಮಾತ್ರ ಎನಿಸಿರುವನು. ಜಾಗ್ರದಾದಿಪ್ರವೃತ್ತಿಕಾರಣತ್ವವು ತುರೀಯನಿಗಿಲ್ಲದಿದ್ದರೂ ಅವನು ಜ್ಞಾನಿಗಳಿಗೆ ಪ್ರಾಪ್ಯನಾಗದಿರಲಾರ.

ಆದಿಮತ್ತ್ವಾದಿ ಧರ್ಮಗಳ ಸಾದೃಶ್ಯವು ಮೋಕ್ಷದಲ್ಲೂ ಅನುಭವಿಸಲು ಯೋಗ್ಯವಾದುದರಿಂದಲೇ 'ಶುಲ್ಕ' ಅಂದರೆ ಏಕಪ್ರಕಾರವಾಗಿರುವುದು ಅವಿಕಾರಿ ಎನಿಸಿದೆ. ತುರೀಯನಿಗೆ ಪ್ರತಿನಿತ್ಯ ವಿಶ್ವ, ತೈಜಸರಿಂದ ಐಕ್ಯವಾಗಲೀ ವಿಭಾಗವಾಗಲೀ ಇಲ್ಲದಿದ್ದುದರಿಂದಷ್ಟೇ ಅವನು ಅಮಾತ್ರ ಎನಿಸಿರುವನು ಎಂದು ಆತ್ಮಸಂಹಿತೆಯೂ ಹೇಳಿದೆ.

ಮೂರನೆ ಖಂಡ ಮುಗಿಯಿತು.

ಖಂಡಾರ್ಥಃ

ವಿಶ್ವಾದಿರೂಪೋಪಾಸಕಾನಾಂ ಸರ್ವಕಾಮಾವಾಪ್ತ್ಯಾದಿಫಲಮುಕ್ತಂ ಪ್ರಾಕ್ । ಇದಾನೀಂ ವಿಶ್ವಾದಿಪ್ರಾಪ್ತಿರೂಪಫಲಂ ಚಾಹ - ಅಕಾರ ಇತಿ ।

ಅ ಇತ್ಯಾಕ್ರಿಯಮಾಣೋ ವಿಶ್ವಃ ಸ್ವಾತ್ಮೋಪಾಸಕಂ ವಿಶ್ವಂ ಸ್ವಾತ್ಮಾನಂ ನಯತೇ ಪ್ರಾಪಯತಿ । 'ಉಕಾರಶ್ಚಾಪಿ ತೈಜಸಮ್' ಇತ್ಯಾದೌ ನಯತ ಇತ್ಯನುಕರ್ಷಃ । ಪ್ರಾಗ್ವದ್ವ್ಯಾಖ್ಯಾ । 'ಪುನಃ ಪ್ರಾಜ್ಞಮ್' ಇತಿ ಪುನಶಬ್ದಃ ಪ್ರತ್ಯಹಂ ಸುಪ್ತೌ ಪ್ರಾಪ್ತಿಸ್ತ್ವೇಽಪಿ ಸ್ಥಾನವಿಶೇಷೇ ಮುಕ್ತೌ ತತ್ಪ್ರಾಪ್ತ್ಯಭಿಪ್ರಾಯೇಣೇತಿ ಜ್ಞೇಯಮ್ । ತುರೀಯೋಪಾಸಕಸ್ಯ ಕಥಮಿತ್ಯತಸ್ತಸ್ಯಾಪಿ ತತ್ಪ್ರಾಪ್ತಿರಸ್ತೀತ್ಯಾಹ - ನಾಮಾತ್ರ ಇತಿ । ಅಮಾತ್ರೋಽನಂಶೇ । ವಿಶ್ವತೈಜಸಯೋಃ ಪ್ರಾಜ್ಞೇನ ಪ್ರತಿದಿನಮ್ ಏಕೀಭಾವೋ ವಿಭಾಗಶ್ಚಾಸ್ತೀತಿ ಮಾತ್ರಾತ್ವಮ್ । ತುರೀಯಸ್ಯ ತು ತನ್ನೇತ್ಯಮಾತ್ರ ಇತ್ಯುಚ್ಯತೇ ತುರೀಯಃ । ಅಮಾತ್ರೇ ಚತುರ್ಥೇ ಅಗತಿಃ ತತ್ಪ್ರಾಪ್ತ್ಯಭಾವಃ ತದುಪಾಸಕಸ್ಯ ನ ವಿದ್ಯತೇ, ವಿದ್ಯತ ಏವ ಗತಿರಿತ್ಯರ್ಥಃ । ತುರೀಯೇಽಸ್ತಿ ಗತಿರಿತಿ ವಕ್ತವ್ಯೇ 'ಅಗತಿರ್ನ ವಿದ್ಯತೇ' ಇತ್ಯುಕ್ತಿಃ ವಿಶ್ವಾದೇರಿವ ಬಾಹ್ಯಾದಿವ್ಯವಹಾರಕಾರಣತ್ವಂ ನ ವಿದ್ಯತೇ ಯಥಾ ತಥಾ ಗಮ್ಯತ್ವಮಪಿ ನೇತಿ ಶಂಕಾಯಾಂ ತನ್ನಿರಾಸಾರ್ಥಮಿತಿ ಜ್ಞೇಯಮ್ ॥ ೮ ॥

॥ ಇತಿ ತೃತೀಯಃ ಖಂಡಃ ॥

*ಅನುವಾದ - ಅಕಾರವಾಚ್ಯನಾದ ವಿಶ್ವನ ಉಪಾಸಕರು ವಿಶ್ವನನ್ನು ಹೊಂದುವರು. ಉಕಾರ ವಾಚ್ಯನಾದ ತೈಜಸನ ಉಪಾಸಕರು ತೈಜಸನನ್ನು ಹೊಂದುವರು. ಮಕಾರವಾಚ್ಯನಾದ ಪ್ರಾಜ್ಞನ ಉಪಾಸಕರು ಪ್ರಾಜ್ಞನನ್ನು ಹೊಂದುವರು. ''ಪುನಃ ಪ್ರಾಜ್ಞಂ'' ಎಂಬ ಪುನಃ ಶಬ್ದವು ಪ್ರತಿದಿನ ಸುಪ್ತಿಯಲ್ಲಿ ಪ್ರಾಜ್ಞನ ಪ್ರಾಪ್ತಿಯಿದೆ. ಆದರೂ ಸ್ಥಾನ ವಿಶೇಷವಾದ ಮುಕ್ತಿಯಲ್ಲಿಯೂ ಅವನ ಪ್ರಾಪ್ತಿ ಉಂಟು ಎಂಬುದಾಗಿ ಹೇಳಲು ಹೊರಟಿದೆ ಎಂದು ತಿಳಿಯಬೇಕು. ವಿಶ್ವ ತೈಜಸರಿಗೆ ನಿತ್ಯದಲ್ಲಿ ಪ್ರಾಜ್ಞನಿಂದ ಏಕೀಭಾವ ಉಂಟು. ಕಾರಣ ಆರೂಪಗಳು ''ಮಾತ್ರ'' ಅಂಶಗಳು ಎನಿಸಿವೆ.*

*ಪ್ರತಿದಿನ ಐಕ್ಯ ವಿಭಾಗಗಳು ಇಲ್ಲದ ಪ್ರಯುಕ್ತ 'ಅಮಾತ್ರ' ಅಂಶನಲ್ಲ ಎಂದೆನಿಸುವ ತುರೀಯನಲ್ಲೂ ಜ್ಞಾನಿಗೆ ಪ್ರವೇಶವಿಲ್ಲವೆಂದಿಲ್ಲ. ಅವನೂ ಜ್ಞಾನಿಗಮ್ಯನೇ ಆಗಿರುವನು ॥ ೮ ॥*

# ಅಥ ಚತುರ್ಥಃ ಖಂಡಃ ।

ಉಪನಿಷತ್

ತುರೀಯನು ನಾದಪ್ರತಿಪಾದ್ಯ

**ಅಮಾತ್ರಶ್ಚತುರ್ಥೋಽವ್ಯವಹಾರ್ಯಃ । ಪ್ರಪಂಚೋಪಶಮಃ ಶಿವೋಽದ್ವೈತ ಓಂಕಾರಃ । ಆತ್ಮೈವ ಸಂವಿಶತ್ಯಾತ್ಮನಾಽಽತ್ಮಾನಂ ಯ ಏವಂ ವೇದ ॥ ೧ ॥**

ಭಾಷ್ಯಂ

**ಆತ್ಮೈವ ಭೂತ್ವಾ ಅನ್ಯಾಭಿಮಾನಂ ತ್ಯಕ್ತ್ವಾ ಪರಮಾತ್ಮನ್ಯೇವ ಪರಮಾತ್ಮಾನಂ ಪ್ರವಿಶತಿ ಉಪಾಸಕಃ । ಅವ್ಯವಹಾರ್ಯತ್ವಾದಿಕಮತ್ರ ಸಮಮಿತಿ ದರ್ಶಯಿತುಂ ಪುನರಪ್ಯುಕ್ತಂ ಅವ್ಯವಹಾರ್ಯತ್ವಾದಿಕಂ ॥ ೧ ॥**

***ಅನುವಾದ*** *— ತುರೀಯನು ಉಪಾಸಕನು 'ಆತ್ಮೈವ ಸಂವಿಶತಿ ಆತ್ಮನಾ ಆತ್ಮಾನಂ' ಎಂದು ತಾನೇ ಪರಮಾತ್ಮನನ್ನು ಪ್ರವೇಶಿಸುವನೆಂದು ಹೇಳಲಾಗಿದೆ. ಇಲ್ಲಿ 'ಆತ್ಮೈವ—ತಾನೇ' ಎಂಬುದರ ಜೊತೆ 'ಭೂತ್ವಾ=ಆಗಿ' ಎಂದು ಸೇರಿಸಿ 'ತಾನೆ ಆಗಿ' ಅರ್ಥಾತ್ ಸಂಸಾರಾವಸ್ಥೆಯಲ್ಲಿರುವ ದೇಹಾಭಿಮಾನವನ್ನು ಬಿಟ್ಟು ಎಂದು ತಾತ್ಪರ್ಯವನ್ನು ಗ್ರಹಿಸಬೇಕು. 'ಆತ್ಮನಾ ಆತ್ಮಾನಂ ಸಂವಿಶತಿ' ಎಂದರೆ ಪರಮಾತ್ಮನ ಪ್ರಸಾದದಿಂದಲೇ ಪರಮಾತ್ಮನನ್ನು ಪ್ರವೇಶಿಸುವನು ಎಂದರ್ಥ. ತುರೀಯನನ್ನು 'ಅಮಾತ್ರ' 'ಅವ್ಯವಹಾರ್ಯ' ಮೊದಲಾದ ವಿಶೇಷಣಗಳಿಂದ ಮೊದಲೇ ನಿರೂಪಿಸಲಾಗಿದ್ದರೂ, ತುರಿಯೋಪಾಸಕನಿಗೆ ಆ ಧರ್ಮಗಳಿಂದ ಸಾಮ್ಯವು ಲಭಿಸುವುದೆಂದು ತಿಳಿಸುವುದಕ್ಕಾಗಿ ಪುನಃ ಇಲ್ಲಿ ಆ ಎಲ್ಲ ವಿಶೇಷಣಗಳನ್ನು ನೀಡಲಾಗಿದೆ.*

ಖಂಡಾರ್ಥಃ

ನಾಂತಃಪ್ರಜ್ಞಮಿತ್ಯಾದಿನೋಕ್ತತುರೀಯಗುಣಾನುವಾದಪೂರ್ವಂ ತುರೀಯಸ್ಯ ನಾದಪ್ರತಿಪಾದ್ಯತ್ವಮಾಹ - ಅಮಾತ್ರ ಇತಿ ।

ಅಮಾತ್ರೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತಶ್ಚತುರ್ಥ ಇತ್ಯನುವಾದಃ । ಓಂಕಾರಃ ಪ್ರಣವೈಕದೇಶನಾದಪ್ರತಿಪಾದ್ಯ ಇತಿ ನಾದಪ್ರತಿಪಾದ್ಯತ್ವಂ ವಿಧೇಯಮ್ । ಅಮಾತ್ರ ಇತ್ಯಾದಿಪದಾನಾಂ ಪ್ರಾಗುಕ್ತರೀತ್ಯಾಽರ್ಥೋ ಧ್ಯೇಯಃ । ಅದೃಷ್ಟಮವ್ಯವಹಾರ್ಯಮಿತ್ಯಾದಿನಾ ಪ್ರಾಗುಕ್ತಸ್ಯಾವ್ಯವಹಾರ್ಯತ್ವಾದೇಃ ಪುನರತ್ರಾನು-

ಪಾದೋಽವ್ಯವಹಾರ್ಯತ್ವಾದಿಕಮುಪಾಸಕೇಽಪಿ ಸಮಂ ಮುಕ್ತಾವಪೀತಿ ದರ್ಶಯಿತುಮಿತಿ ಜ್ಞೇಯಮ್ । ನಾದಪ್ರತಿಪಾದ್ಯತ್ವೇನ ತುರೀಯೋಪಾಸಕಸ್ಯ ಫಲಮಾಹ - ಆತ್ಮೇತಿ । ಯೋಽಧಿಕಾರೀ ಏವಮಮಾತ್ರತ್ವಾವ್ಯವಹಾರ್ಯತ್ವಾದಿನಾ ಓಂಕಾರಮೋಂಕಾರೈಕದೇಶ-ನಾದಪ್ರತಿಪಾದ್ಯಂ ವೇದ ಜಾನಾತಿ, ಸ ಆತ್ಮೈವ, ಶುದ್ಧಾತ್ಮೈವ ಸನ್ ದೇಹಗೇಹಾದಾವನ್ಯತ್ರ ಮಮತಾದ್ಯಭಿಮಾನತ್ಯಾಗೀ ಭೂತ್ವೇತಿ ಯಾವತ್, ಆತ್ಮನಾ ಪರಮಾತ್ಮನಾ, ತತ್ಪ್ರಸಾದೇನೇತಿ ಯಾವತ್, ಆತ್ಮಾನಂ ನಾದಬೋಧ್ಯಂ ತುರೀಯಾತ್ಮಾನಂ ಸಂವಿಶತಿ ಪ್ರವಿಶತಿ । ಪ್ರವಿಶ್ಯ ಚ ಬಹಿರಂತಃ ಸ್ವೇಚ್ಛಯಾ ಸ್ವಯೋಗ್ಯಭೋಗಾನ್ ಭುಂಜಾನಃ ಸುಖಮಾಸ್ತ ಇತಿ ಭಾವಃ ॥ ೧ ॥

*ಅನುವಾದ - ''ನಾಂತಂ ಪ್ರಜ್ಞಃ'' ಮುಂತಾಗಿ ಹೇಳಿದ ತುರೀಯನ ಗುಣಗಳನ್ನು ಮತ್ತೊಮ್ಮೆ ಹೇಳುತ್ತಾ ಈ ತುರೀಯನು ನಾದ ಪ್ರತಿಪಾದ್ಯನೆಂದು ಹೇಳುತ್ತದೆ- ''ಅಮಾತ್ರಃ'' ಎನ್ನುವ ಮಂತ್ರವು. ವಿಶ್ವಾದಿರೂಪಗಳಲ್ಲಿ ನಾಲ್ಕನೆಯದಾದ ತುರೀಯವೆಂಬ ಭಗವದ್ರೂಪವು ವಿಶ್ವಾದಿಗಳಂತೆ ಪರಸ್ಪರ ಐಕ್ಯ ವಿಭಾಗವುಳ್ಳದ್ದಲ್ಲ. ಸಂಸಾರಾವಸ್ಥೆಯಲ್ಲಿರುವ ಜನರ ವ್ಯವಹಾರಗಳಿಗೆ ಅಗೋಚರವಾದುದು, ವ್ಯಾಪ್ತವಾದುದು, ಉತ್ಕೃಷ್ಟಾನಂದ ಸ್ವರೂಪವಾದುದು, ದುಃಖರಹಿತವಾದುದು, ಮಿಥ್ಯಾಜ್ಞಾನವನ್ನು ನಾಶಪಡಿಸುವಂಥಹುದು. ಅದೃಷ್ಟ, ಅವ್ಯವಹಾರ್ಯ, ಎಂದು ಹಿಂದೆ ಹೇಳಿದ ತುರೀಯನ ಗುಣಗಳು ಉಪಾಸಕನಿಗೆ ಮುಕ್ತಿಯಲ್ಲಿಯೇ ದೊರಕುವವು ಎಂಬುದನ್ನು ತಿಳಿಸುವುದಕ್ಕಾಗಿ ಮತ್ತೊಮ್ಮೆ ಇಲ್ಲಿಯೂ ಹೇಳಿರುವುದು ಎಂದು ಭಾವಿಸಬೇಕು. ಇಂಥ ತುರೀಯನೇ ಓಂಕಾರದ ಒಂದು ಭಾಗವಾದ ನಾದವೆಂಬ ವರ್ಣದಿಂದ ಪ್ರತಿಪಾದ್ಯನು. ಹೀಗೆ ತುರೀಯನನ್ನು ಧ್ಯಾನಿಸುವವನು ದೇಹಾಭಿಮಾನವನ್ನು ತೊರೆದು ತುರೀಯನ ಅನುಗ್ರಹದಿಂದ ತುರೀಯನನ್ನೇ ಹೊಂದುವನು.*

ಉಪನಿಷತ್

ಅತ್ರೈತೇ ಶ್ಲೋಕಾ ಭವಂತಿ —

ಓಂಕಾರಂ ಪಾದಶೋ ವಿದ್ಯಾತ್ ಪಾದಾ ಮಾತ್ರಾ ನ ಸಂಶಯಃ ।
ಓಂಕಾರಂ ಪಾದಶೋ ಜ್ಞಾತ್ವಾ ನ ಕಿಂಚಿದಪಿ ಚಿಂತಯೇತ್ ॥ ೨ ॥

ಖಂಡಾರ್ಥಃ

ಪ್ರಣವಾವಯವಾಕಾರಾದಿಪ್ರತಿಪಾದ್ಯಭಗವದ್ರೂಪಜ್ಞಾನಮನ್ಯಸ್ಮರಣತ್ಯಾಗೇನ ಸಂಪಾದ್ಯಮಿತ್ಯತ್ರ ಮಂತ್ರಾನ್ ಬ್ರಹ್ಮದೃಷ್ಟಾನಾಹ - ಅತ್ರೈತ ಇತಿ ।

ಅತ್ರೇತ್ಯುಕ್ತಾರ್ಥಮ್ । ಓಂಕಾರಮೋಮಿತ್ಯಾಕ್ರಿಯಮಾಣಮಾತ್ಮಾನಂ ಸಮಗ್ರ ಪ್ರಣವ ಪ್ರತಿಪಾದ್ಯಂ ಪಾದಶಃ ಪಾದ್ಯೈಃ ಪದ್ಯಂತೇ ಪ್ರಾಪ್ಯಂತೇ ಸ್ವೋಪಾಸಕೈರಿತಿ ಪಾದೈರ್ವಿಶ್ವಾದ್ಯಂಶೈರ್ವಿದ್ಯಾತ್ ವಿಶ್ವಾದಿಚತುರೂಪಾತ್ಮನಾ ಜಾನೀಯಾತ್ । ಪಾದಾಃ ಕಿಂರೂಪಾ ಇತ್ಯತ ಆಹ - ಪಾದಾ ಮಾತ್ರಾ ಇತಿ । ಪ್ರಣವಾಂಶಭೂತಾಕಾರಾದಿ-ಪ್ರತಿಪಾದ್ಯಾ ಇತ್ಯರ್ಥಃ । ಓಂಕಾರಂ ಪ್ರಣವವಾಚ್ಯಂ ಪಾದಶಃ ಚತುರೂಪತಯಾ ಜ್ಞಾತ್ವಾ ಕಿಂಚಿದಪಿ ನ ಚಿಂತಯೇತ್ । ಇತರಚಿಂತಯಾ ಜಾಯಮಾನಫಲಸ್ಯ ತತೋಽಧಿಕಫಲಸ್ಯ ಚೈತಜ್ಜ್ಞಾನಾದೇವ ಸಿದ್ಧೇರಿತಿ ಭಾವಃ ॥ ೨ ॥

*ಅನುವಾದ - ಶ್ರೀ ಹರಿಯು ಪ್ರಣವಪ್ರತಿಪಾದ್ಯನೆಂದು ತಿಳಿದವನಿಗೆ ದೊರಕುವ ಫಲ ಮೊದಲಾದ ಪ್ರಮೇಯಗಳಲ್ಲಿ ಬೃಹದ್ಭಾಷ್ಯವಾದ ಈ ಮಂತ್ರಗಳು ಸಂವಾದಿಯಾಗಿವೆ.*

*ಓಂ ಎಂದು ಕರೆಯಲ್ಪಡುವ ಶ್ರೀಹರಿಯ ವಿಶ್ವಾದಿ ನಾಲ್ಕು ಪಾದಗಳನ್ನೂ ತಿಳಿಯಬೇಕು. ಪಾದಗಳೆಂದರೆ ಅಂಶಗಳು, ಓಂಕಾರವಾಚ್ಯನಾದ ತುರೀಯನನ್ನು ಓಂಕಾರದ ನಾದವೆಂಬ ಅಂಶದಿಂದ ಪ್ರತಿಪಾದ್ಯನೆಂದು ತಿಳಿದವನು ಸಾಂಸಾರಿಕ ವಿಷಯಗಳೊಂದನ್ನೂ ಯೋಚಿಸುವುದಿಲ್ಲ. ಅಂದರೆ ತುರೀಯನನ್ನು ಹೊಂದಿ ಮುಕ್ತಿಯಲ್ಲಿ ಸ್ವರೂಪಾನಂದವನ್ನೇ ಅನುಭವಿಸುವನು. ಇತರ ಚಿಂತನೆಯಿಂದ ದೊರಕುವ ಫಲವೂ ಮತ್ತು ಅದಕ್ಕಿಂತಲೂ ಮಿಗಿಲಾದ ಫಲವೂ ಸಹ ತುರೀಯ ಚಿಂತನೆಯಿಂದಲೇ ಲಭಿಸುವುದು ಎಂದು ಭಾವ.*

### ಉಪನಿಷತ್

ಯುಂಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಂ ।
ಪ್ರಣವೇ ನಿತ್ಯಯುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥ ೩ ॥

### ಖಂಡಾರ್ಥಃ

ಸಂಸಾರಭಯಂ ತಿತೀರ್ಷುಣಾ ಓಂಕಾರೋ ಭಗವಾನ್ ಸರ್ವಥಾ ಧ್ಯೇಯ ಇತ್ಯತ್ರ ಶ್ಲೋಕಂ ಪಠತಿ - ಯುಂಜೀತೇತಿ ।

ಪ್ರಣವೇ ಹರೌ ಚೇತೋ ಮನಃ ಯುಂಜೀತ ತದ್ವಿಷಯಂ ಕಾರ್ಯಮ್ । ಕೀದೃಶಃ ಪ್ರಣವ ಇತ್ಯತ ಆಹ - ಪ್ರಣವೋ ಬ್ರಹ್ಮೇತಿ । ಗುಣೈರ್ಬೃಂಹಣಾತ್ ಪೂರ್ಣತ್ವಾತ್ ವಿಶ್ವಾದಿರೂಪಚತುಷ್ಟಯಾತ್ಮಕಃ ಪ್ರಣವಃ ನಿರ್ಭಯಂ, ಬ್ರಹ್ಮ ಗುಣಪೂರ್ಣ ಇತಿ, ವಿಶ್ವಾದಿಚತುರೂಪೋ ಹರಿರ್ಜಾಗ್ರದಾದ್ಯವಸ್ಥಾಪ್ರಣಯನಾತ್ ಪ್ರಣವ ಇತ್ಯುಚ್ಯತೇ ।

ಪ್ರಪೂರ್ವಾನ್ಣಯತೇರಚ್ಪ್ರತ್ಯಯೇ (ಧಾತ್ವಿಕಾರಸ್ಯೋಕಾರಾದೇಶೇ) ಧಾತೋರ್ನುಶಬ್ದಾದೇಶೇ ಗುಣಾವಾದೇಶಣತ್ವೇಷು ಪ್ರಣವ ಇತಿ ಸಿದ್ಧೇಃ । ಫಲಮಾಹ - ಪ್ರಣವೇ ನಿತ್ಯಯುಕ್ತಸ್ಯೇತಿ । ನಿತ್ಯಂ ಧ್ಯಾಯಿನ ಇತ್ಯರ್ಥಃ । ಕ್ವಚಿತ್ ಕೇನಾಪಿ ನಿಮಿತ್ತೇನೇತ್ಯರ್ಥಃ । ಫಲಸಾಮ್ಯಾರ್ಥಮೇವ ಪ್ರಾಕ್ ನಿರ್ಭಯಮಿತಿ ವಿಶೇಷಣೋಕ್ತಿಃ ॥ ೩ ॥

*ಅನುವಾದ - ಜೀವಾತ್ಮನಿಗೆ ಜಾಗ್ರದಾದಿ ಅವಸ್ಥೆಗಳನ್ನು ಉಂಟುಮಾಡುವುದರಿಂದ ವಿಶ್ವಾದಿ ನಾಲ್ಕು ರೂಪಗಳುಳ್ಳ, ನಿರ್ಭಯನಾದ ಶ್ರೀಹರಿಯು ಜಾಗ್ರದಾದ್ಯವಸ್ಥೆಗಳನ್ನು ನೀಡುವುದರಿಂದ ಪ್ರಣವನೆನಿಸಿದ್ದಾನೆ. ಅಂಥಹ ಶ್ರೀಹರಿಯಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ಹೀಗೆ ಪ್ರಣವನೆನಿಸುವ ಶ್ರೀಹರಿಯಲ್ಲಿ ನಿತ್ಯವೂ ಮನಸ್ಸಿಟ್ಟವನಿಗೆ ಸಂಸಾರದ ಭೀತಿ ಇರುವುದಿಲ್ಲ.*

*ವಿವರಣೆ - ಪ್ರ ಉಪಸರ್ಗದಿಂದ ಕೂಡಿದ ''ಣೀಜ್''ಧಾತುವಿಗೆ ಅಚ್ ಪ್ರತ್ಯಯ ಹೇಳಿ, ಣೀಧಾತುವಿಗೆ ''ನು'' ಆದೇಶ ಮಾಡಿ ಗುಣ, ಅವಾದೇಶ, ಣತ್ವಗಳನ್ನು ಹೇಳಿದಾಗ ''ಪ್ರಣವ'' ಎಂಬ ರೂಪಸಿದ್ಧಿಸುವುದು.*

### ಉಪನಿಷತ್

**ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಂ ಸ್ಮೃತಃ ।**
**ಅಪೂರ್ವೋಽನಂತರೋಽಬಾಹ್ಯೋಽನಪರಃ ಪ್ರಣವೋಽವ್ಯಯಃ ॥೪॥**

### ಖಂಡಾರ್ಥಃ

ವಿಶ್ವಾದಿರೂಪಾಣಾಮನ್ಯೋನ್ಯಂ ಮೂಲರೂಪೇಣ ಚ ನ ಗುಣತಾರತಮ್ಯಮಿತ್ಯಾಹ - ಪ್ರಣವೋ ಹೀತಿ ।

ಅಪರಮಪರಃ ಪೂರ್ವತನೋ ಮೂಲರೂಪಪೂರ್ವಾವತಾರಾತ್ಮಾ ಪ್ರಣವೋ ಹರಿಃ ಬ್ರಹ್ಮ ಪೂರ್ಣಃ । ಹಿ ಪ್ರಸಿದ್ಧಮೇತತ್, 'ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ' ಇತ್ಯಾದಾವಿತಿ ಭಾವಃ । ಪರಂ ಪಶ್ಚಾತ್ತನೋ ವಿಶ್ವಾದ್ಯವತಾರರೂಪಃ ಪ್ರಣವೋ ಹರಿಶ್ಚ ಬ್ರಹ್ಮ ಪೂರ್ಣ ಇತ್ಯಾಕರ್ಷಃ, ಸ್ಮೃತಃ ಶ್ಲೋಕದ್ವಯಸ್ಥಾ ಬ್ರಹ್ಮಣೇತಿ ಯೋಜ್ಯಮ್ । ಪೂರ್ವಾವತಾರೇ ಪಶ್ಚಿಮಾವತಾರೇ ಚ ಪೂರ್ಣತ್ವೈವ, ನ ಕ್ವಚಿದಪಿ ನ್ಯೂನತೇತಿ ಭಾವಃ । ತಥಾ ಚ ಸೂತ್ರಂ 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' (ಬ್ರ.ಸೂ.೩-೨-೧೧) ಇತಿ । ಪ್ರಣವೋ ಬ್ರಹ್ಮೇತ್ಯುಕ್ತಂ ಪೂರ್ಣತ್ವಂ ವ್ಯನಕ್ತಿ - ಅಪೂರ್ವ ಇತಿ । ನ ವಿದ್ಯತೇ ಪೂರ್ವಂ ಕಾರಣಂ ಯಸ್ಯ ಸೋಽಪೂರ್ವಃ ಪ್ರಣವಃ ಕಾರಣಹೀನಃ । ನಾಶಾಭಾವಾದನಂತರಃ । ಅಂತರಶಬ್ದಪರ್ಯಾಯೋಽತ್ರಾಂತರಶಬ್ದಃ ।

ಸರ್ವಗತತ್ವಾದಬಾಹ್ಯಃ । ಪರಾಧೀನಸ್ಥಿತ್ಯಭಾವಾದನಪರಃ । ಅವ್ಯಯಃ ಶಶ್ವದೇಕಪ್ರಕಾರಃ ಪ್ರಣವೋ ಹರಿಃ ॥ ೪ ॥

*ಅನುವಾದ - ಪ್ರಣವಪ್ರತಿಪಾದ್ಯನಾದ ಶ್ರೀಹರಿಯ ಮೊದಲ ಅವತಾರಗಳಾದ ವಾಸುದೇವಾದಿರೂಪಗಳೂ ಅನಂತರದ ಅವತಾರರೂಪಗಳಾದ ವಿಶ್ವಾದಿರೂಪಗಳೂ, ಪೂರ್ಣಗಳೇ ಆಗಿವೆ. ಭಗವಂತನ ಎಲ್ಲ ಅವತಾರಗಳು ಪೂರ್ಣ ಎಂದು ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೆ ಎಂಬ ಪ್ರಮಾಣದಿಂದ ಸಿದ್ಧವೆಂಬುದನ್ನು ''ಹಿ'' ಶಬ್ದ ಹೇಳುತ್ತದೆ. ಎಲ್ಲ ಅವತಾರಗಳಲ್ಲಿ ಪೂರ್ಣತೆಯೇ ಇದೆ ಹೊರತು ನ್ಯೂನತೆ ಇಲ್ಲ ಎನ್ನುವುದನ್ನು ''ನ ಸ್ಥಾನ ತೋऽಪಿ'' ಎಂಬ ಸೂತ್ರವೂ ಹೇಳುತ್ತದೆ. ಪ್ರಣವ ಪ್ರತಿಪಾದ್ಯನಾದ ವಿಶ್ವಾದಿ-ರೂಪೀ ಶ್ರೀ ಹರಿಯು 'ಅಪೂರ್ವ', 'ಅನಾದಿ, ಅನಂತರ', ನಿತ್ಯ, ಅಬಾಹ್ಯ', ವ್ಯಾಪ್ತ, ' ಅನಪರ' ಸ್ವತಂತ್ರ ಹಾಗೂ ಅವ್ಯಯ.*

ಉಪನಿಷತ್

**ಸರ್ವಸ್ಯ ಪ್ರಣವೋ ಹ್ಯಾದಿರ್ಮಧ್ಯಮಂತಸ್ತಥೈವ ಚ ।**
**ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನಂತರಂ ॥ ೫ ॥**

ಖಂಡಾರ್ಥಃ

ಸರ್ವಸ್ಯಾದಿಃ ಕಾರಣಮ್, ಮಧ್ಯಂ ಸ್ಥಿತಿಕರ್ತಾ, ತಥಾऽಂತಃ ನಾಶಕಶ್ಚೈವೇತಿ ನಿಶ್ಚಯಮಾಹ । ಜ್ಞಾನಿನಃ ಫಲಮಾಹ - ಏವಂ ಹೀತಿ ।

ಏವಂ ಬ್ರಹ್ಮತ್ವಾದಿನಾ ಪ್ರಕಾರೇಣ ಪ್ರಣವಂ ಹರಿಂ ಜ್ಞಾತ್ವಾ ತದನಂತರಂ ಪ್ರಾರಬ್ಧಭೋಗಾನಂತರಂ ತದ್ ಬ್ರಹ್ಮ ವ್ಯಶ್ನುತೇ ವಿಶೇಷೇಣ ಪ್ರಾಪ್ನೋತಿ । ತತ್ಪ್ರಾಪ್ತೇಃ ಸದಾ ಸತ್ತ್ವೇऽಪಿ ಸ್ಥಾನಾದಿವಿಶೇಷಾಭಿಪ್ರಾಯೇಣ ವೀತ್ಯುಕ್ತಿಃ ॥ ೫ ॥

*ಅನುವಾದ - ಪ್ರಣವನಾಮಕ ಶ್ರೀಹರಿಯು ಸಕಲ ಜಗತ್ತಿಗೂ ''ಆದಿ'' ಸೃಷ್ಟಿಕರ್ತನು, ''ಮಧ್ಯ'' ಸ್ಥಿತಿಕರ್ತನು ''ಅಂತ'' ಸಂಹಾರಕರ್ತನು. ಹೀಗೆ ಪ್ರಣವವಾಚ್ಯನಾದ ಶ್ರೀಹರಿಯನ್ನು ತಿಳಿದು ಪ್ರಾರಬ್ಧ ಭೋಗಾನಂತರವಲ್ಲಿ ಶ್ರೀಹರಿಯನ್ನೇ ಹೊಂದುವನು.*

*ಭಗವಂತನ ಪ್ರಾಪ್ತಿ ಸರ್ವದಾ ಇದ್ದರೂ ಸಹ ವಿಶೇಷ ಸ್ಥಾನವನ್ನು ಪಡೆಯುತ್ತಾನೆ ಎನ್ನುವುದಕ್ಕೆ ವ್ಯಶ್ನುತೇ ಎನ್ನುವಲ್ಲಿ ''ವಿ'' ಎಂದು ಪ್ರಯೋಗಿಸಿದೆ.*

ಉಪನಿಷತ್

ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯ ಹೃದಯೇ ಸ್ಥಿತಂ ।
ಸರ್ವವ್ಯಾಪಿನಮೋಂಕಾರಂ ಮತ್ವಾ ಧೀರೋ ನ ಶೋಚತಿ ॥ ೬ ॥

ಖಂಡಾರ್ಥಃ

ಪ್ರಣವಸ್ಯ ಹರೇರ್ಮಹಿಮಾಂತರಮಾಹ - ಪ್ರಣವಂ ಹೀತಿ । ಈಶ್ವರಂ ಸರ್ವನಿಯಾಮಕಂ ಓಂಕಾರಂ ಓಮಿತ್ಯಾಕ್ರಿಯಮಾಣಂ ಮತ್ವಾ ನ ಶೋಚತಿ, ಮುಕ್ತೋ ಭವತೀತ್ಯರ್ಥಃ ॥ ೬ ॥

*ಅನುವಾದ - ಸರ್ವನಿಯಾಮಕನಾದ ಪ್ರಣವವಾಚ್ಯನಾದ ಶ್ರೀಹರಿಯು ಎಲ್ಲರ ಹೃದಯದಲ್ಲಿರುವನೆಂದು ತಿಳಿಯಬೇಕು. ವಿವೇಕಿಯಾದವನು ಎಲ್ಲೆಡೆ ವ್ಯಾಪಿಸಿರುವ ಓಂ ಎಂದು ಕರೆಯಲ್ಪಡುವ ಶ್ರೀ ಹರಿಯನ್ನು ತಿಳಿದ ಮೇಲೆ ಎಂದೂ ದುಃಖಿಯಾಗುವುದಿಲ್ಲ, ಮುಕ್ತನಾಗುವನು.*

ಉಪನಿಷತ್

ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।
ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥
ಸ ಮುನಿರ್ನೇತರೋ ಜನ ಇತಿ ॥ ೭ ॥

ಇತಿ ಚತುರ್ಥಖಂಡಃ ।

ಭಾಷ್ಯಂ

ತುರೀಯಂ ನಾದನಾಮಾನಂ ಹರಿಂ ಜ್ಞಾತ್ವಾ ಪರಂ ಪದಂ ।
ತಮೇವ ಪ್ರವಿಶೇಚ್ಛುದ್ಧರೂಪೀ ತತ್ಸದೃಶಾತ್ಮವಾನ್ ॥
ಜ್ಞಾನಾನಂದೌ ಚ ಶಕ್ತಿಶ್ಚ ತಥಾಪಿ ನ ಸಮಾಃ ಕ್ವಚಿತ್ ।
ವಿಮುಕ್ತಸ್ಯಾಪಿ ಜೀವಸ್ಯ ಪಾರತಂತ್ರ್ಯಂ ಚ ನಿತ್ಯದಾ ।
ಚತೂರೂಪಸ್ಯಾಸ್ಯ ವಿಷ್ಣೋರ್ನಾಮ ಪ್ರಣವ ಇತ್ಯಪಿ ।
ಜಾಗ್ರದಾದಿಪ್ರಣಯನಾತ್ ಸ ಏವ ಬ್ರಹ್ಮ ಬೃಂಹಣಾತ್ ।
ಓಮಿತ್ಯಾಕ್ರಿಯಮಾಣತ್ವಾದೋಂಕಾರಃ ಸ ಪ್ರಕೀರ್ತಿತಃ ।
ಆದಿಮತ್ವಾದಯೋ ಹ್ಯರ್ಥಾ ಓಮಿತ್ಯಸ್ಯ ಶ್ರುತೌ ಶ್ರುತಾಃ ।
ಅಪೂರ್ವಃ ಕಾರಣಾಭಾವಾನ್ನಾಶಾಭಾವಾದನಂತರಃ ।
ಪರಾಧೀನಸ್ಥಿತ್ಯಭಾವಾದನಪರ ಉದಾಹೃತಃ ।

ಸರ್ವಗತ್ವಾದಬಾಹ್ಯಶ್ಚ ತಂ ಜ್ಞಾತ್ವಾ ವಿಪ್ರಮುಚ್ಯತೇ । ಇತಿ ಚ ॥
ಪರತ್ವಮಪರತ್ವಂ ಚ ವಿಷ್ಣೋರೇಕಸ್ಯ ವೈ ಯದಾ ।
ಶ್ರೂಯತೇ ನತು ಸಾಮರ್ಥ್ಯಭೇದಸ್ತತ್ರ ಕಥಂಚನ ॥
ಅವತಾರಸ್ಯ ಪೂರ್ವತ್ವಾತ್ ಪೌರ್ವಾಪರ್ಯಮುದಾಹೃತಂ ॥

ಇತಿ ಬ್ರಹ್ಮತರ್ಕೇ ।

ಪೂರ್ವಾವತಾರೇ ಪಶ್ಚಿಮಾವತಾರೇಽಪಿ ಪೂರ್ಣ ಏವೇತಿ ಪ್ರಣವೋ ಹ್ಯಪರಂ ಬ್ರಹ್ಮೇತ್ಯಾದೇರರ್ಥಃ ॥

*ಅನುವಾದ — ಓಂಕಾರದ ನಾದವೆಂಬ ವರ್ಣದಿಂದ ಪ್ರತಿಪಾದ್ಯನಾದ ತುರೀಯನನ್ನು ತಿಳಿದವನು ದೇಹಾದಿ ಅಭಿಮಾನಗಳನ್ನು ಕಳೆದುಕೊಂಡು ಶುದ್ಧ ಸ್ವರೂಪಿಯಾಗಿ ತುರೀಯನಂತೆಯೇ ಸಂಸಾರಿ ಜೀವರ ವ್ಯವಹಾರಕ್ಕೆ ನಿಲುಕದಿರುವುದೇ ಮೊದಲಾದ ಧರ್ಮಯುಕ್ತನಾಗಿ ತುರೀಯನ ಸರ್ವೋತ್ತಮ-ರೂಪವನ್ನು ಪ್ರವೇಶಿಸುವನು. ತುರೀಯೋಪಾಸಕನಿಗೆ ಅವ್ಯವಹಾರ್ಯತ್ವವೇ ಮೊದಲಾದ ಧರ್ಮಗಳಿಂದ ತುರೀಯನ ಸಾಮ್ಯ ಸಿದ್ಧಿಸುವುದಾದರೂ ಜ್ಞಾನ, ಆನಂದ, ಶಕ್ತಿ ಮೊದಲಾದ ಧರ್ಮಗಳಲ್ಲಿ ಪೂರ್ಣಸಾಮ್ಯ ಉಂಟಾಗಲಾರದು. ಹಾಗೆಯೇ ಜೀವಾತ್ಮನು ವಿಮುಕ್ತನಾದ ಮೇಲೂ ಎಂದೆಂದೂ ಪರತಂತ್ರನಾಗಿಯೇ ಇರುವನು. ಹೊರತು ತುರೀಯನಂತೆ ಸ್ವತಂತ್ರನಾಗುವುದಿಲ್ಲ. ವಿಶ್ವಾದಿ ನಾಲ್ಕು ರೂಪಗಳುಳ್ಳ ಶ್ರೀ ಹರಿಯು ಬೇರೆ ಬೇರೆ ರೂಪಗಳಿಂದ ಜಾಗ್ರದಾದಿ ಅವಸ್ಥೆಗಳನ್ನು ತಂದುಕೊಡುವುದರಿಂದ ಪ್ರಣವ ಎನಿಸಿರುವನು. ಗುಣಗಳಿಂದ ಪೂರ್ಣನಾಗಿರುವುದರಿಂದ ಬ್ರಹ್ಮ ಎನಿಸಿರುವನು. ಓಂ ಎಂದು ಕರೆಸಿಕೊಳ್ಳುವ ಪ್ರಯುಕ್ತ ಓಂಕಾರ ಎನಿಸಿರುವನು. ಶ್ರೀಹರಿಯ ಆದಿಮತ್ವಾದಿ ಧರ್ಮಗಳು ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಪ್ರಣವನಾಮಕನಾದ ಭಗವಂತನು ಉತ್ಪತ್ತಿಗೆ ಕಾರಣವಿಲ್ಲದ ಪ್ರಯುಕ್ತ ಅಪೂರ್ವನೆಂದೂ, ನಾಶವಿಲ್ಲದುದರಿಂದ ಅನಂತರ ಎಂದೂ, ಪರಾಧೀನತೆ ಇಲ್ಲದಿರುವುದರಿಂದ ಅನಪರನೆಂದೂ, ಎಲ್ಲೆಡೆ ಇರುವುದರಿಂದ ಅಬಾಹ್ಯ ಎಂದೂ ಕರೆಯಲ್ಪಡುವನು — ಎಂದು ಆತ್ಮಸಂಹಿತೆಯಲ್ಲಿ ಹೇಳಿದೆ.*

*ಶ್ರೀ ಹರಿಗೆ ಪರತ್ವ ಹಾಗೂ ಅಪರತ್ವವನ್ನು ಎಲ್ಲಿಯಾದರೂ ಶ್ರುತಿಯು ಹೇಳಿದ್ದಲ್ಲಿ ಶ್ರೀಹರಿಯ ರೂಪಗಳಲ್ಲಿ ಪರಸ್ಪರವಾಗಿ ಸಾಮರ್ಥ್ಯದಲ್ಲಿ ವೈಲಕ್ಷಣ್ಯವಿದೆ ಎಂದು ಭಾವಿಸಬಾರದು. ರೂಪಗಳಲ್ಲಿ ಒಂದು ರೂಪದ ಅವತಾರವು ಮೊದಲು. ಆದುದರಿಂದ ಅದು ಪರ ಎಂದೂ, ಮತ್ತೊಂದು ರೂಪದ ಅವತಾರವು ಮತ್ತೆ ಆದುದರಿಂದ ಅದು ಅಪರ ಎಂದೂ ಹೀಗೆ ಅವತಾರಗಳ ಕಾಲದ ಪೌರ್ವಾ-ಪರ್ಯವನ್ನು ಅಪೇಕ್ಷಿಸಿ ಪರಾಪರವ್ಯವಹಾರ ಎಂದು ಬ್ರಹ್ಮತರ್ಕ ಹೇಳಿದೆ.*

*ಮೊದಲ ಅವತಾರದಲ್ಲೂ ಅನಂತರದ ಅವತಾರದಲ್ಲೂ ಶ್ರೀಹರಿಯು ಪೂರ್ಣನಾಗಿಯೇ ಇರುವನೆಂಬುದಾಗಿ 'ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಂ ಸ್ಮೃತಂ' ಎಂಬ ಉಪನಿಷತ್ತಿನ ಅರ್ಥ.*

**ಖಂಡಾರ್ಥಃ**

**ಏವಮುಕ್ತಾಂ ಸಮಸ್ತವ್ಯಸ್ತಪ್ರಣವಾಭಿಧೇಯಭಗವದುಪಾಸನಾಮನುವದಂಸ್ತಜ್ಞಾನಿನಃ ಸ್ತವೇನೋಪಸಂಹರತಿ - ಅಮಾತ್ರ ಇತಿ ।**

**ಅಮಾತ್ರಃ ಭಿನ್ನಾಂಶಹೀನೋಽನಂತಮಾತ್ರೋ ವಿಶ್ವಾದ್ಯನಂತಾಂಶೋ ದ್ವೈತ-ಸ್ಯೋಪಶಮಃ ಸರ್ವಾನಿಷ್ಟನಿವರ್ತಕಃ । ಶಿವೋ ನಿರ್ದುಃಖಸುಖರೂಪಃ । ಓಂಕಾರ ಓಮಿತ್ಯಾಕ್ರಿಯಮಾಣೋ ಯೇನ ವಿದಿತೋ ಜ್ಞಾತಃ ಸ ಮುನಿರ್ಮನನಶೀಲೋ ನೇತರ ಇತಿ ದ್ವಿರುಕ್ತಿರುಕ್ತಸರ್ವಪ್ರಮೇಯಾವಧಾರಣಾರ್ಥಾ ॥ ೭ ॥**

**ಇತಿ ಚತುರ್ಥಃ ಖಂಡಃ ॥**

***ಅನುವಾದ*** *- ಈ ರೀತಿಯಾಗಿ ಸಮಸ್ತ ಹಾಗೂ ವ್ಯಸ್ತ ಪ್ರಣವ ಪ್ರತಿಪಾದ್ಯನಾದ ಶ್ರೀಹರಿಯ ಉಪಾಸನೆಯನ್ನು ನಿರೂಪಿಸಿ, ಉಪಾಸನೆಯನ್ನು ತಿಳಿದ ಜ್ಞಾನಿಯನ್ನು ಕೊಂಡಾಡುತ್ತ ಉಪಸಂಹರಿಸುತ್ತದೆ. ಓಂಕಾರವಾಚ್ಯನಾದ ವಿಶ್ವಾದಿನಾಲ್ಕುರೂಪಗಳುಳ್ಳ ಶ್ರೀಹರಿಯು ಭಿನ್ನಾಂಶರಹಿತನು, ವಿಶ್ವಾದಿ ಅನಂತ ಅಂಶಗಳುಳ್ಳವನು. ಅನಿಷ್ಟವನ್ನು ದೂರಮಾಡುವವನು. ದುಃಖವಿಲ್ಲದ ಸುಖ-ರೂಪನು. ಇಂತಹ ಶ್ರೀಹರಿಯನ್ನು ಗುರೂಪದೇಶದಿಂದ ಯಾರು ಚೆನ್ನಾಗಿ ತಿಳಿಯುವನೋ ಅವನೇ ಅಪರೋಕ್ಷಜ್ಞಾನಿಯಾಗುತ್ತಾನೆ, ಉಳಿದವರರು ಅಪರೋಕ್ಷಿಗಳಾಗುವುದಿಲ್ಲ.*

*ಈ ವಿಷಯವು ನಿಶ್ಚಿತವಾದುದು ಎಂದು ತಿಳಿಸಲು ಉಪನಿಷತ್ತು ಕೊನೆಯಲ್ಲಿ ಸಮುನಿರ್ನೇತರೋಜನಃ-ಸಮುನಿರ್ನೇತರೋಜನಃ ಎಂಬುದಾಗಿ ಎರಡು ಬಾರಿ ಹೇಳಿದೆ.*

*ನಾಲ್ಕನೆ ಖಂಡ ಮುಗಿಯಿತು.*

**ಏಕೋಽಪಿ ನಿರ್ವಿಶೇಷೋಽಪಿ ಚತುರ್ಧಾ ವ್ಯವಹಾರಭಾಕ್ ।**
**ಯಸ್ತಂ ವಂದೇ ಚಿದಾತ್ಮಾನಂ ವಿಷ್ಣುಂ ವಿಶ್ವಾದಿರೂಪಿಣಂ ।**

**। ಇತಿ ಮಾಂಡೂಕೋಪನಿಷದ್ಭಾಷ್ಯಂ ಸಮಾಪ್ತಂ ।**

*ಅನುವಾದ* - *ಶ್ರೀವಿಷ್ಣು ಸರ್ವದಾ ಒಬ್ಬನೇ. ಅವನ ರೂಪಗಳಲ್ಲಿ ಪರಸ್ಪರ ವೈಲಕ್ಷಣ್ಯಗಳಿಲ್ಲ. ಆದರೂ ಜೀವಾತ್ಮರಿಗೆ ಜಾಗ್ರತ್ ಸ್ವಪ್ನ ಸುಷುಪ್ತಿ ಹಾಗೂ ಮೋಕ್ಷ ಎಂಬ ನಾಲ್ಕು ಸ್ಥಿತಿಯನ್ನು ನೀಡುತ್ತ ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರ್ಯ ಎಂಬುದಾಗಿ ನಾಲ್ಕು ರೂಪಗಳುಳ್ಳವನೆಂದು ವ್ಯವಹರಿಸಲ್ಪಡುವನು. ಜ್ಞಾನರೂಪಿಯಾದ ಅಂಥಹ ವಿಷ್ಣುವನ್ನು ನಮಿಸುವೆನು.*

*ಮಾಂಡೂಕ ಉಪನಿಷತ್ತಿನ ಭಾಷ್ಯ ಮುಗಿಯಿತು.*

**ಖಂಡಾರ್ಥ:**

ಪ್ರಣವಪ್ರತಿಪಾದ್ಯಾಯ ಚತುರ್ಮೂರ್ತಿಸ್ವರೂಪಿಣೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ।
ಇತಿ ಮಾಂಡೂಕೋಽಪನಿಷದರ್ಥಾನಾಂ ಸಂಗ್ರಹೋತ್ರ ಯಃ ।
ರಾಘವೇಂದ್ರಕೃತಸ್ತೇನ ಪ್ರೀಯತಾಂ ಕಮಲಾಪತಿಃ ।

ಇತಿ ಶ್ರೀರಾಘವೇಂದ್ರಯತಿವಿರಚಿತಮಾಂಡೂಕೋಪನಿಷತ್
ಖಂಡಾರ್ಥಃ ಸಂಪೂರ್ಣಃ ॥

*ಹೀಗೆ ಮಾಂಡೂಕೋಪನಿಷತ್ತಿಗೆ ಖಂಡಾರ್ಥ ವಿವರಿಸಿದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಕೊನೆಯಲ್ಲಿಯೂ ಭಗವಂತನಿಗೆ ನಮಿಸುತ್ತಾರೆ—*

*ಸಮಸ್ತ ಹಾಗೂ ವ್ಯಸ್ತ ಪ್ರಣವದಿಂದ ಪ್ರತಿಪಾದ್ಯನಾದ, ವಿಶ್ವ, ತೈಜಸ, ಪ್ರಾಜ್ಞ, ತುರೀಯವೆಂದು ನಾಲ್ಕು ರೂಪನಾದ ಲಕ್ಷ್ಮೀಪ್ರಾಣರಿಗೆ ಸ್ವಾಮಿಯಾದ, ಭಕ್ತರ ಅಭೀಷ್ಟವನ್ನು ಪೂರೈಸುವ ಶ್ರೀಹರಿಗೆ ನಮಸ್ಕಾರವು.*

*ಹೀಗೆ ಮಾಂಡೂಕೋಪನಿಷತ್ತಿನ ಅರ್ಥದ ಸಂಗ್ರಹವನ್ನು ರಾಘವೇಂದ್ರನು ಮಾಡಿರುವನು. ಇದರಿಂದ ಕಮಲಾಪತಿಯು ಪ್ರೀತನಾಗಲಿ.*

*ಶ್ರೀ ರಾಘವೇಂದ್ರಗುರುಸಾರ್ವಭೌಮರು ರಚಿಸಿದ*
*ಮಾಂಡೂಕೋಪನಿಷತ್ ಖಂಡಾರ್ಥವು ಸಂಪೂರ್ಣವಾಯಿತು.*

*ಶ್ರೀಮತ್ ಸತ್ಯಾತ್ಮತೀರ್ಥಾನಾಮಾಜ್ಞಯಾऽನುಗ್ರಹೇಣ ಚ ।*
*ಶಿಷ್ಯೇಣ ಗುತ್ತಲಾರ್ಯಾಣಾಂ ಭಾಷ್ಯಂ ಮಾಂಡೂಕಮೇತತ್ ॥*
*ಉಪಾಧ್ಯಾಯೇತ್ಯುಪಾಖ್ಯೇನ ಪ್ರಲ್ಹಾದಾರ್ಯತನೂಭುವಾ ॥*
*ಶ್ರೀರಾಘವೇಂದ್ರತೀರ್ಥಾನಾಂ ಖಂಡಾರ್ಥೇನ ಚ ಶೋಭಿತಂ ।*
*ಅನೂದಿತಂ ಚ ಕೃಷ್ಣೇನ ಪ್ರೀತ್ಯೈ ಮಾಧವಮಧ್ವಯೋಃ ॥*

**ಶ್ರೀಕೃಷ್ಣಾರ್ಪಣಮಸ್ತು**